# ಭವಮುಕ್ತ ಭಜನಾವಳಿ

(ಭಜನೆ ಮತ್ತು ಭಕ್ತಿಗೀತೆಗಳು)



**ಭವಮುಕ್ತ ಪೀಠಸ್ಥಿತೆ ಶ್ರೀ ಕೊಲ್ಲೂರು ಮೂಕಾಂಬಿಕಾ ಮಹಾಮಾತೆಯ ಪಾದಪಂಕಜಗಳಿಗೆ**



ಜ್ಞಾನವು ಒಂದೇ ವೇದವು ಹಲವು
ಗುರಿಯು ಒಂದೇ ಸಾಧನೆ ಹಲವು
ಆತ್ಮವು ಒಂದೇ ಜೀವಿಯು ಹಲವು
ಪರಮ ಪದಕೆ ಬೇಕು ಗುರುವಿನ ಒಲವು
ಸದ್ಗುರುವಿನ ಒಲವು.

ಶೀರ್ಷಿಕೆ : ಭವಮುಕ್ತ ಭಜನಾವಳಿ

ಲೇಖಕರು : ಶ್ರೀಮತಿ ಬಿ. ಎಸ್. ಶಾಂತಮ್ಮ

ಪ್ರತಿಗಳ ಸಂಖ್ಯೆ : 1,000

ಪ್ರಥಮ ಮುದ್ರಣ : 1997

ಪುಸ್ತಕದ ಬೆಲೆ : ರೂ. **28/-**

ಪುಟಗಳು : X + 106

ಅಕ್ಷರ ಜೋಡಣೆ : ಶ್ರೀ ಗಾಯತ್ರಿ ಬುಕ್ ಕಂಪನಿ, ಬೆಂಗಳೂರು, ✆ 3327700

ಮುದ್ರಕರು : ಶ್ರೀ ವಿಶ್ರುತಿ ಪ್ರಿಂಟ್ಸ್, ಬೆಂಗಳೂರು, ✆ 6703248



ಪ್ರತಿಗಳು ದೊರೆಯುವ ಸ್ಥಳ : ದಿವ್ಯಾ ಎಂಟರ್‌ಪ್ರೈಸಸ್, ಬೆಂಗಳೂರು
ಪೇಜರ್ : 9624-270492

**ಈ ಪುಸ್ತಕಕ್ಕೆ ತಿರುಮಲ ತಿರುಪತಿ ದೇವಸ್ಥಾನಂ ಟ್ರಸ್ಟ್ ಇವರಿಂದ ಆರ್ಥಿಕ ನೆರವು ಪಡೆಯಲಾಗಿದೆ.**

THIS BOOK IS PUBLISHED WITH THE FINANCIAL ASSISTANCE OF TIRUMALA TIRUPATHI DEVASTHANAMS UNDER THEIR SCHEME AID TO PUBLISH RELIGIOUS BOOKS".

ಪ್ರಕಾಶಕರು:

**ಶ್ರೀಮೂಕಾಂಬಿಕಾ ಭವಮುಕ್ತಪೀಠ**

5-59, ಸೆಕ್ಟಾರ್-1, H.M.T. ಕಾಲೋನಿ,

ಬೆಂಗಳೂರು - 560 031.

## 'ಪ್ರಕಾಶಕರ ನುಡಿ'

**ಶ್ರೀಮಹಾಗಣಪತಯೇ ನಮಃ**

ಸರ್ವಮಂಗಳೆ ಶ್ರೀ ಮೂಕಾಂಬಿಕಾ ಮಹಾಮಾತೆಯ ಅಡಿದಾವರೆಗಳಲ್ಲಿ ವಿನಯದಿಂದ ನಮಿಸುತ್ತಾ ಚಿಂತನಶೀಲವಾದ, ಭಕ್ತಿ ಪ್ರದವಾದ, ಜ್ಞಾನ ಪ್ರಚೋದಕವಾದ **"ಭವಮುಕ್ತ ಭಜನಾವಳಿ'** ಎಂಬ ಪ್ರಥಮ ಪುಷ್ಪವನ್ನು ಸಮರ್ಪಿಸುತ್ತಿದ್ದೇವೆ.

ಈಗಾಗಲೇ ಪ್ರಕಟಗೊಂಡಿರುವ ಶ್ರೀಮೂಕಾಂಬಿಕಾ ಗೀತಗುಚ್ಛ, ದೇವದುಂದುಭಿ, ಶ್ರೀರೇಣುಕಾ ಭಕ್ತಿ ಭಂಡಾರ ಎಂಬ ಕೃತಿಗಳ ಲೇಖಕರಾದ ಶ್ರೀಮತಿ ಬಿ.ಎಸ್. ಶಾಂತಮ್ಮನವರದು ಅನುಪಮವಾದ ಪ್ರತಿಭೆ. ಇವರ ಪ್ರತಿಭೆಯ ಪರಿಚಯದ ಪ್ರಯತ್ನ ಪ್ರಜ್ವಲಿಸುವ ಸೂರ್ಯಕಿರಣವನ್ನು ಸಂಗ್ರಹಿಸಿದಂತೆ ವ್ಯರ್ಥ ಪ್ರಯತ್ನವಾದೀತು. ಪದಗಳನ್ನು ಮೀರಿದ ವ್ಯಕ್ತಿತ್ವ ಇವರದು. ಜೀವನದಲ್ಲಿ ನೊಂದು ತನ್ನ ಬಳಿ ಬರುವ ಪ್ರತಿಯೊಬ್ಬ ಜೀವಿಗೂ ಈ ಕರ್ಮದಿಂದ ಪಾರಾಗುವ ಸುಲಭೋಪಾಯವನ್ನು ಸೂಕ್ತವಾಗಿ ಜ್ಞಾನದ ಮುಖಾಂತರ ನೀಡಿ ಅಜ್ಞಾನವೆಂಬ ಕತ್ತಲನ್ನು ಸರಿಸಿ, ಆತ್ಮಶಕ್ತಿಯನ್ನು ತುಂಬಿ ಸನ್ಮಾರ್ಗದೆಡೆಗೆ ಮಾರ್ಗದರ್ಶನ ಮಾಡುತ್ತ ಗುರುಸ್ಥಾನದಲ್ಲಿರುವ ದೈವದತ್ತವಾದ ಕೊಡುಗೆ. ತನ್ನಲ್ಲಿ ವಿಶೇಷವಾದ ಸಾಧನಾರೂಪ ಶಕ್ತಿ ಸಾಮರ್ಥ್ಯಗಳಿದ್ದರೂ ಅದನ್ನು ಹೊರತೋರಗೊಡದೆ ಮಕ್ಕಳಿಂದ ಹಿಡಿದು ಹಿರಿಯರವರೆಗೂ ಎಲ್ಲರೊಡನೆ ಸ್ನೇಹದಿಂದ ಬೆರೆತು ನಗುಮೊಗದಿಂದ ವಿನಯದಿಂದ ನಡೆದುಕೊಳ್ಳುವ ಅಪರೂಪದ ಸ್ನೇಹಜೀವಿ.

ಲೇಖಕರ ಸರ್ವತೋಮುಖ ಪ್ರತಿಭೆಯ ಬಗ್ಗೆ ಈ ಪುಸ್ತಕದಲ್ಲಿರುವ ಭಜನೆಗಳೇ ಸ್ವಯಂಸಾಕ್ಷಿ. ಈ ಭಜನೆಗಳಲ್ಲಿ ಬೇಡಿಕೆಯಿದೆ, ನಿವೇದನೆಯಿದೆ, ಅರ್ಪಣೆಯಿದೆ, ಭಗವಂತನನ್ನು ಕುರಿತು ಮನೋಜ್ಞ ಪ್ರಾರ್ಥನೆಯಿದೆ. ಅಂತೆಯೇ ಅವನ ಲೀಲೆಗಳ ಅವನ ವೈಚಿತ್ರದ ಅರಿವನ್ನು ನೀಡುವ ಸರಳ ವಿವರಣೆಯಿದೆ. ಹಾಗೇ ಒಲಿಯದೇ ಮೌನವಾದ ಭಗವಂತನಿಗೆ ಸವಾಲು ಹಾಕುವ ಆತ್ಮಶಕ್ತಿಯಿದೆ. ಸರಳ ಸುಂದರ ಭಾವನಾಪೂರಿತವಾದ ಈ ಭಜನಾವಳಿಯ ಕುಸುಮಗಳನ್ನು ಭಗವಂತನೂ ಸ್ವೀಕರಿಸುತ್ತಾನೆಂಬುದು ಅವರ ಭಜನೆಗಳ ಜನಪ್ರಿಯತೆಯೇ ಸಾಕ್ಷಿ. ಭಗವಂತನನ್ನು ಭಕ್ತನಾಗಿ, ದಾಸನಾಗಿ, ಸೇವಕನಾಗಿ ಅವನ ಪ್ರತಿನಿಧಿಯಾಗಿ ಹಾಡಿಹೊಗಳುವ ವಿಶೇಷತೆ ಇವರದು.

ಇಚ್ಛೆ ಬಂದ ಸ್ಥಳಗಳಲಿ ತ
ನ್ನಿಚ್ಛೆ ಬಂದಂದದಲಿ ಚರಿಸುತ
ಲಿಚ್ಛೆಯಿಂ ವಿಷಯಗಳ ತಾ ಭೋಗಿಸಿಯು ಭೋಗಿಸದೇ
ತುಚ್ಛರಾದರ ಸಂಗಕೆಯು ತಾ
ನೊಚ್ಚತದಿ ಸಂಬಂಧಿಸದೆ ಮನ
ಮುಚ್ಚಿ ಸಹಜಾನಂದದವಲಿ ಸಾಕ್ಷ್ಯಾಗಿಯಿಹನೆಂದಾ

||ಶ್ರೀದೇವಿಮಹಾತ್ಮೆ. 46||

ಈ ರೀತಿಯಾಗಿ ತಾದ್ಯಾತ್ಮ ಸಾರೂಪ್ಯ, ಸಾನಿಧ್ಯ ಎಲ್ಲದರಲ್ಲೂ ತನ್ನ ಆತ್ಮಶಕ್ತಿಯಿಂದ ಶೋಭಿಸುತ್ತಾ ಕೈವಲ್ಯ ಸಾಧನೆಗೆ ದಾರಿದೀಪವಾಗಿದ್ದಾರೆ.

ಈ ಭಜನೆಗಳು ಸ್ವಯಂ ಅನುಭವಸಿದ್ಧವಾಗಿ ಮೂಡಿ ಬಂದಿರುವುದರಿಂದ ಶಂಖ ಪ್ರತಿನಾದದಲ್ಲೂ ಓಂಕಾರವನ್ನೇ ಮೊಳಗುವಂತೆ ಪ್ರತಿ ಭಜನೆಯೂ ಭಗವಂತನೆಡೆಗೆ ತೇಲಿಸುವ ಅತ್ಯುತ್ತಮ ಸಾಧನವಾಗಿದೆ. ಭಾವಭಕ್ತಿಪೂರಿತವಾದ ಈ ಕೃತಿಗಳನ್ನು ಅವರದೇ ಕಂಠದಲ್ಲಿ ಆಲಿಸುವ ಪ್ರತಿಯೊಬ್ಬರಿಗೂ ಮೈರೋಮಾಂಚಿತವಾಗಿ ಭಗವಂತನ ಸಾಮಿಪ್ಯದ ಅರಿವಾಗುತ್ತವೆ. ಇದು ಎಂತಹ ನಾಸ್ತಿಕನಿಗಾದರೂ ಕಲುಷಿತ ಮನ ಶುದ್ಧಿಗೊಳಿಸಿ ಭಗವಂತನೆಡೆಗೆ ಸೆಳೆಯುತ್ತದೆ.

ಸಜ್ಜನರ ಸಹವಾಸ ಹೆಜ್ಜೇನು ಮೆದ್ದಂತೆ ಎಂಬ ನುಡಿಯಂತೆ ಸದಾ ಭಗವಂತನ ಧ್ಯಾನದಲ್ಲಿ ಅವನ ಒಡನಾಟದಲ್ಲಿ ಬೆರೆತಿರುವ ಈ ಅಪರೂಪದ ಲೇಖಕಿ ಎಲೆ ಮರೆಯಕಾಯಂತೆ ಹೊರಜಗತ್ತಿಗೆ ಸಾಮಾನ್ಯರಂತೆ ಕಾಣಿಸುತ್ತಾ ಆಗಾಗ ಮಹಾಮಾತೆಯ ಬಗ್ಗೆ ಅವಳ ಅನುಗ್ರಹದ ಬಗ್ಗೆ ಭಾವಪೂರ್ಣವಾಗಿ 'ಕೆಲಸಕ್ಕೆ ಬಾರದ ಹುಳುಕು ಕೊರಡಾಗಿದ್ದೆ ನಾನು ಎಲ್ಲವರಲ್ಲಿ ಬಲ್ಲಿದಳ ಮಾಡಿದೆ ನೀನು' ಎಂಬ ಮಾತುಗಳನ್ನು ಹೇಳುತ್ತಿರುತ್ತಾರೆ.

ಈಗಾಗಲೇ ಈ ಲೇಖಕರು ಬರೆದ ಸಣ್ಣಕಥೆ, ಹಾಸ್ಯಗವನ ಕಿರು ಕಾದಂಬರಿಗಳು ಹೆಸರಾಂತ ಪತ್ರಿಕೆಗಳಲ್ಲಿ ಪ್ರಕಟವಾಗಿ ಜನಪ್ರಿಯವಾಗಿದೆ. ಕೇವಲ ಸಾಹಿತ್ಯಕ್ಷೇತ್ರದಲ್ಲಿ ಮಾತ್ರವಲ್ಲದೆ ಹೋಮಿಯೋಪತಿ ವೈದ್ಯಪದ್ಧತಿಯಲ್ಲಿ ಸಿದ್ಧಹಸ್ತರೆನಿಸಿದ್ದಾರೆ.

ಇವರ ಮುಂದಿನ ಪುಸ್ತಕ 'ಸತ್ಯ ಸಾಯುಜ್ಯ' ಎಂಬ ಆತ್ಮೋನ್ನತಿಯ ಕೃತಿ ಬೇಗನೆ ಹೊರಬರಲಿದೆ. ಆಡು ಮುಟ್ಟದ ಸೊಪ್ಪಿಲ್ಲ ಎನ್ನುವಂತೆ ಅವರಲ್ಲಿ ಬಾರದ ವಿಚಾರವಿಲ್ಲ, ಸೃಷ್ಠಿಯಿಂದ ಹಿಡಿದು ಲಯದವರೆಗೂ ಭವದಿಂದ ಭಗವಂತನೆಡೆಗೆ ಮಾರ್ಗದರ್ಶಕವಾಗಬಲ್ಲ ಅತ್ಯಮೂಲ್ಯವಾದ ವಿಚಾರಗಳನ್ನು ಈ ಕೃತಿ ಒಳಗೊಂಡಿದೆ.

ಈಗಾಗಲೇ ಪ್ರಕಟವಾಗಿ ಜನಪ್ರಿಯವಾಗಿರುವ ಈ ಭಜನಾವಳಿಗಳನ್ನು ಧ್ವನಿಮುದ್ರಣಮಾಡಿ ಧ್ವನಿ ಸುರಳಿ ಬಿಡುಗಡೆ ಮಾಡಬೇಕೆಂಬ ಅಭಿಲಾಷೆಯಿದೆ. ಆಸಕ್ತಿಯುಳ್ಳವರು ಸಂಪರ್ಕಿಸಬಹುದು.

ಈ ಪುಸ್ತಕದ ರಕ್ಷಾಕವಚವನ್ನು ಅಂದವಾಗಿ ರಚಿಸಿಕೊಟ್ಟ ಆತ್ಮೀಯ ಗೆಳೆಯ ಶ್ರೀ ಬಸವರಾಜ್, ಸುಂದರವಾಗಿ ಅಕ್ಷರ ಜೋಡಣೆ ಮಾಡಿಕೊಟ್ಟ ಮತ್ತೊಬ್ಬ ಗೆಳೆಯ ಗಾಯತ್ರಿ ಗ್ರಾಫಿಕ್ಸ್‌ನ ಶ್ರೀ ಜ್ವಾಲೇಂದ್ರ ಅವರಿಗೂ, ನಿಗದಿತ ವೇಳೆಯಲ್ಲಿ ಅಂದವಾಗಿ ಮುದ್ರಿಸಿ ಸಹಕರಿಸಿದ ಶ್ರೀ ವಿಶ್ರುತಿ ಪ್ರಿಂಟ್ಸ್‌ನ ಮಾಲೀಕರಿಗೂ, ನಮ್ಮೆಲ್ಲಾ ಕೆಲಸಗಳಿಗೆ ಪ್ರೋತ್ಸಾಹ ನೀಡಿ ಬೆನ್ನುತಟ್ಟಿ ಮಾರ್ಗದರ್ಶನ ನೀಡುತ್ತಿರುವ ಕನ್ನಡದ ಹಿರಿಯ ಚಿಂತಕ, ಲೇಖಕ ಮಾನ್ಯಶ್ರೀ ಆದ್ಯರಾಮಚಾರ್ಯರಿಗೂ, ಈ ಅಮೂಲ್ಯ ಕೃತಿ ಹೊರಬರಲು ಸಹಕರಿಸಿದ ಇನ್ನೆಲ್ಲಾ ಬಂಧುಮಿತ್ರರಿಗೂ ವಂದನೆಗಳನ್ನರ್ಪಿಸುತ್ತಾ "ಶ್ರೀಮಹಾಕಾಳಿ ಮಹಾಲಕ್ಷ್ಮಿ ಮಹಾಸರಸ್ವತಿ ಬ್ರಹ್ಮವಿಷ್ಣು ಮಹೇಶ್ವರ ಜ್ಯೋತಿರ್ಲಿಂಗೈಕ್ಯ ಸ್ವರೂಪಿಣಿ, ಕೋಲಾಸುರ ಭಯಂಕರಿ, ಜಗಜ್ಜನನಿ ಭವಮುಕ್ತ ಪೀಠಸ್ಥಿತೆ ಶ್ರೀಮೂಕಾಂಬಿಕಾ ಮಹಾಮಾತೆಯು" ಸನ್ಮಂಗಳವನ್ನುಂಟು ಮಾಡಲೆಂದು ಹಾರೈಸಿ, ಈ ಕಾಣಿಕೆಯನ್ನು ಅರ್ಪಿಸುತ್ತಿದ್ದೇವೆ.

ಶ್ರೀ ಈಶ್ವರ ನಾಮಸಂವತ್ಸರ
ಜ್ಯೇಷ್ಠ ಬಹುಳ ಷಷ್ಠಿ

ಪ್ರಕಾಶಕರು

ಓಂ ಶಕ್ತಿ

# ಲೇಖಕರ ನುಡಿ

ಆತ್ಮೀಯ ಸಹೃದಯರೇ,

ವಿಶ್ವವಂದ್ಯ ವಿನಾಯಕನ ಪಾದವನ್ನು ಸ್ಮರಿಸುತ್ತ ಸಕಲ ಚರಾಚರಗಳ ಸೃಷ್ಠಿಕರ್ತೆಯಾದ, ಸರ್ವಮಂಗಳೆ ಶ್ರೀಮೂಕಾಂಬಿಕಾ ಮಾತೆಯ ಅನುಗ್ರಹದಿಂದ, ಈ "ಭವಮುಕ್ತ ಭಜನಾವಳಿ" - ಎಂಬ ಕಿರು ಹೊತ್ತಿಗೆಯನ್ನು ತಮ್ಮ ಮುಂದಿಡುತ್ತಿದ್ದೇನೆ.

ಈ ಮೊದಲು ಪ್ರಕಟವಾದ "ದೇವದುಂದುಭಿ - ಶ್ರೀಮೂಕಾಂಬಿಕಾ ಗೀತ ಗುಚ್ಛ - ಶ್ರೀ ರೇಣುಕಾಭಕ್ತಿಭಂಡಾರ" ಎಂಬ ಭಜನೆ ಪುಸ್ತಕಗಳು ಬಿಡುಗಡೆಯಾಗಿ, ಭಕ್ತರ ಪ್ರೇರಣೆ, ಮನ್ನಣೆ ಮತ್ತು ಪೋಷಣೆಯಿಂದ ಜನಪ್ರಿಯವಾಗಿ ಮತ್ತಷ್ಟು ಗೀತೆಗಳನ್ನು ರಚಿಸಲು ಅವಕಾಶವಾಯಿತು. ಕಲೆಗಾರನಾದ ಗುರುವಿನಿಂದ ಅದನ್ನು ಕಲಿತು ತಾನೂ ಕಲಾವಿದನಾಗುವಂತೆ ಕೆಲವನ್ನು ಬಲ್ಲವರಿಂದ ತಿಳಿದು, ಓದಿ, ಅನುಭವಿಸಿ, ಶ್ರೀವಾಗ್ದೇವಿಯಿಂದ ಉದುರಿದ ಅಕ್ಷರ ಕುಸುಮಗಳನ್ನು ನನಗೆ ತೋಚಿದ ರೀತಿಯಲ್ಲಿ ಮಾಲೆಯಾಗಿ ಹೆಣೆದಿದ್ದೇನೆ.

ಅದು ಘಮಘಮಿಸಿ ಭಕ್ತಿಯ ಪರಿಮಳ ಬೀರುತ್ತಾ ಭಕ್ತರಿಗೆ ಮುದ ನೀಡಿ, ಭಗವಂತನ ಪಾದಕ್ಕೆ ಭಕ್ತಿ ಕುಸುಮವಾಗಿ ಅರ್ಪಿತವಾದರೆ, ಈ ಪಾಮರನು ಪರಮದೆಡೆಗೆ ಅಂಬೆಗಾಲಿಕ್ಕಿದಂತೆ. ದೈವದ ಒಂದೊಂದು ಅವತಾರಗಳಲ್ಲೂ ಒಂದೊಂದು ವೈಶಿಷ್ಟ್ಯವಿದೆ. ಅಂಥ ಮಹಾಮಹಿಮನಾದ ಭಗವಂತನ ಸ್ಮರಣೆಯೇ, ಈ ಭವದಿಂದ ಸ್ವಾನುಭವ ಪಡೆದು ಮುಕ್ತಿಯನ್ನು ಹೊಂದುವುದಾಗಿದೆ.

ಪ್ರತಿಯೊಂದು ಕರ್ಮಕ್ಕೂ ತಕ್ಕ ಫಲವುಂಟು. ಇದು ದೈವ ನಿರ್ಣಯ. ಹಾಗೆ ಭಜನೆಗೂ ಕೂಡ ಬೆಂಕಿಯು ತಿಳಿದೋ ತಿಳಿಯದೆಯೋ ಮುಟ್ಟಿದರೆ ಸುಡುವಂತೆ, ಭಗವಂತನ ನಾಮವು ಕಿವಿಯ ಮೇಲೆ ಬಿದ್ದರೆ ಅಜ್ಞಾನವು ನಾಶವಾಗುತ್ತದೆ.

ಪ್ರತಿಯೊಂದು ವಸ್ತುವಿಗೂ ಆಧಾರ ಬೇಕು. ಮನೆಗೆ ತಳಪಾಯ ಬೇಕು. ಬದುಕಿಗೆ ಆಧಾರ, ಗುರಿ ಬೇಕು. ದಾರಿ ಇಲ್ಲದೆ ಗುರಿ ಸೇರುವುದಾದರೂ ಹೇಗೆ? ವಿಳಾಸವಿಲ್ಲದೆ ಗುರುತಿಸುವುದು ಹೇಗೆ? ಯಾಗ, ಯಜ್ಞ, ಪೂಜೆ, ಭಜನೆ ಇವೆಲ್ಲ ಭಗವಂತನ ವಿಳಾಸಗಳು. ಆದ್ದರಿಂದ ನವವಿಧ ಭಕುತಿಗಳಲ್ಲಿ ಈ ಭಜನೆಯೂ ಒಂದಾಗಿದೆ.

"ಭಜನೆ" - ಭ- ಎಂದರೆ ಭವದ. ಜ - ಜನ್ಮಾಂತರಗಳನ್ನು, ನ - ಇಲ್ಲದಂತೆ ಮಾಡುವ ಸುಲಭೋಪಾಯದ ಸರಳ ಸಾಧನಮಾರ್ಗ. ಭಜನೆಗೆ ಭಕ್ತಿಯೇ ಆಧಾರ. ಭಕ್ತಿಯಿಂದ ಭಗವಂತನನ್ನು ನಿಷ್ಕಾಮದಿಂದ ಭಜಿಸಿ ಈ ಕರ್ಮವನ್ನು ಜ್ಞಾನದಿಂದ ನಾಶಮಾಡಿ, 'ಶ್ರದ್ಧೆ' ಎಂಬ ಮೆಟ್ಟಲೇರಿ ಭವಮುಕ್ತರಾಗೋಣ.

'ಭವ ಮುಕ್ತ' ಎಂದರೆ ಕೇವಲ ಹಣದಿಂದಾಗಲೀ ಈ ಯೌವ್ವನ ಬಂಧನಗಳಿಂದಾಗಲೀ ಮುಕ್ತರಾಗುವುದಲ್ಲ. ಈ ಜನನ ಮರಣಕ್ಕೆ ಕಾರಣವಾದ ಕರ್ಮದಿಂದಲೂ ಮುಕ್ತರಾಗಿ, ನಿತ್ಯಸತ್ಯವಾದ, ಪರಮಾನಂದಕರವಾದ ದಿವ್ಯ ಜ್ಯೋತಿಯಿಂದ ರಾರಾಜಿಸುತ್ತಿರುವ, ಜೀಶ - ಆತ್ಮದ ಸ್ವಸ್ವರೂಪ ದರ್ಶನಕ್ಕಾಗಿ ಭಗವಂತನ ಸನ್ನಿಧಿಗೆ ತೆರಳೋಣ.

ತಾಯಿಯನ್ನು ಕಳೆದುಕೊಂಡ ಮಗುವು ಮತ್ತೆ ತಾಯಿಯನ್ನು ಸೇರುವಂತೆ, ಸಮುದ್ರದಿಂದ ಜಾರಿದ ಜಲದ ಬಿಂದುವು ಮತ್ತೆ ಸಮುದ್ರವನ್ನು ಕೂಡುವಂತೆ, 'ಕರ್ಮ ಕಾರಣದ ಸೂತಕದಿಂದ', ಭಗವಂತನಿಂದ ದೂರಾದ ಈ ಮೈಲಿಗೆ ಶರೀರವನ್ನು, ಅವನ ಅವಿರತ ಸ್ಮರಣೆಯ ಪುಣ್ಯಜಲದಿಂದ ಪವಿತ್ರಗೊಳಿಸಿ, **"ಭವ ಮುಕ್ತ ಪೀಠ"**ದಲ್ಲಿ ಐಕ್ಯವಾಗೋಣ.

ಈ ಪುಸ್ತಕ ಮುದ್ರಣಕ್ಕೆ "ಶ್ರೀ ತಿರುಮಲ ತಿರುಪತಿ ದೇವಸ್ಥಾನಂ ಟ್ರಸ್ಟ್"ನವರು ಧನಸಹಾಯ ನೀಡಿ ಪ್ರೋತ್ಸಾಹಿಸಿದ್ದಾರೆ. ಅವರಿಗೆ ನಾನು ಅಭಾರಿಯಾಗಿದ್ದೇನೆ. ಈ ಭಜನಾ ಕಾರ್ಯಕ್ರಮಗಳನ್ನು ವಿವಿಧ ದೇವಸ್ಥಾನಗಳಲ್ಲಿ ಏರ್ಪಡಿಸಿ, ಭಗವಂತನ ಸೇವೆಗೆ ಅವಕಾಶ ಮಾಡಿಕೊಟ್ಟಿರುವ "ಶ್ರೀ ತಿರುಮಲ ತಿರುಪತಿ ದೇವಸ್ಥಾನಂ, ಧರ್ಮಪ್ರಚಾರ ಸಮಿತಿ, ಬೆಂಗಳೂರು" ಇವರಿಗೂ ನನ್ನ ಹೃತ್ಪೂರ್ವಕ ವಂದನೆಗಳನ್ನರ್ಪಿಸುತ್ತೇನೆ.

ಸಕಾಲದಲ್ಲಿ ಈ ಪುಸ್ತಕ ಮುದ್ರಣಕ್ಕೆ ಸಹಕರಿಸಿದ ಮಿತ್ರರಿಗೂ ನನ್ನ ನಮನಗಳು.

ಈ ಸತ್ಕಾರ್ಯದಲ್ಲಿ ಮುಖ್ಯ ಪಾತ್ರವಹಿಸಿ ಸಹಕರಿಸಿದ ಬಾಲ್ಯದಿಂದಲೂ ದೇವಿಯ ಆರಾಧಕರಾದ ಶ್ರೀ ಹೆಚ್.ಕೆ. ಬಾಲಸೂರಿ, ಸೌ|| ವೀಣಾ, ದಂಪತಿಗಳಿಗೂ ದೈವಾನುಗ್ರಹ ವಾಗಲೆಂದು ಹಾರೈಸಿ. ಈ ಶುಭಸಂದರ್ಭದಲ್ಲಿ ಜನಿಸಿದ ನನ್ನ ಮೊಮ್ಮಗ ಜಿ. ವಿನಾಯಕನಿಗೂ ಹರಸಿ.

ಸರ್ವರೀತಿಯಿಂದಲೂ ಪ್ರತ್ಯಕ್ಷದೈವದಂತೆ ಬೆನ್ನೆಲುಬಾಗಿ ನಿಂತು ನನಗೆ ಸಹಕಾರ ನೀಡಿ ಹುರಿದುಂಬಿಸುತ್ತಿರುವ ನಮ್ಮ ಯಜಮಾನರಾದ ಶ್ರೀ ನಾರಾಯಣಸ್ವಾಮಿ ಹಾಗೂ ನನ್ನ ಸೋದರ ಸೋದರಿಯರಿಗೂ ನಾನು ಕೃತಜ್ಞಳಾಗಿದ್ದೇನೆ.

ಇದರಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕಾರ, ಪ್ರೋತ್ಸಾಹ ನೀಡಿದ, ನೀಡುವ ಎಲ್ಲ ಭಕ್ತರಿಗೂ "ಶ್ರೀ ಲಕ್ಷ್ಮೀಪದ್ಮಾವತಿ ವೆಂಕಟೇಶ್ವರ ಸ್ವಾಮಿಯು" "ಶ್ರೀ ಮೂಕಾಂಬಿಕಾ ಮಹಾಮಾತೆಯು ಸಕಲ ಸನ್ಮಂಗಳವುಂಟು ಮಾಡಲೆಂದು ಸವಿನಯದಿಂದ ಪ್ರಾರ್ಥಿಸುತ್ತೇನೆ. ಈ ನನ್ನ ತೊದಲು ನುಡಿಗಳನ್ನು ತಮ್ಮ ಮುಂದಿಡುತ್ತಿದ್ದೇನೆ. ಇದರಲ್ಲಿ ಲೋಪ ದೋಷಗಳಿದ್ದಲ್ಲಿ, ಹಂಸಕ್ಷೀರ ನ್ಯಾಯದಂತೆ ಸ್ವೀಕರಿಸಬೇಕಾಗಿ ವಿನಂತಿ.

"ಸರ್ವೇ ಜನಾಃ ಸುಖಿನೋ ಭವಂತು."

ಇಂತು ತಮ್ಮ ವಿಶ್ವಾಸಿ,
**ಶ್ರೀಮತಿ ಬಿ.ಎಸ್. ಶಾಂತಮ್ಮ** H.M.T.
ಬೆಂಗಳೂರು.

# ಅಂತರ್ಸೂಚಿ

| ಕ್ರ.ಸಂ. | ಶೀರ್ಷಿಕೆ | ಪುಟ ಸಂಖ್ಯೆ |
|---|---|---|
| 32. | ಶ್ರೀರಾಮನಾಮ ತಾರಕ | 26 |
| 33. | ಕೊಂಡಾಡಿ ಹಾಡಿ | 26 |
| 34. | ರಾಮ ರಾಮ ರಾಮ | 27 |
| 35. | ಭಲೆ ಭಲೆ ವೀರ | 28 |
| 36. | ಎಂಥಾ ಬಲವಂತನಯ್ಯ | 29 |
| 37. | ವಸಂತಪುರದೊಳು | 29 |
| 38. | ಸಂಜೀವಿನಿಗಿರಿ | 30 |
| 39. | ಓ ಆಂಜನೇಯ | 31 |
| 40. | ಹನುಮ ಹನುಮ | 31 |
| 41. | ಗುರುಪಾದ ಸೇವೆಮಾಡಿ | 33 |
| 42. | ಚಿತ್ತ ಹಾರಿಸೊ | 34 |
| 43. | ಕಾಮಕ್ರೋಧ ಲೋಭ | 34 |
| 44. | ಶರಣು ಶರಣುಶ್ರೀಶಂಕರ | 35 |
| 45. | ರಾಘವೇಂದ್ರ ರಾಘವೇಂದ್ರ | 36 |
| 46. | ಬಾಳ ಬೆಳಕಾಗಿ ಬಂದ | 36 |
| 47. | ದಯೆತೋರೋಗುರು | 37 |
| 48. | ಬಾರಯ್ಯ ಗುರು ರಾಘವೇಂದ್ರ | 38 |
| 49. | ಮೈಯ ಮರೆತು ಬನ್ನಿರಿ | 39 |
| 50. | ಜಗದೋದ್ಧಾರಕ | 40 |
| 51. | ಚಿಂತೆ ಏಕಣ್ಣ | 41 |
| 52. | ಸಾಯಿನಾಥನ ಭಜನೆ | 42 |
| 53. | ಸ್ವಾಮಿ ಶಿರಡಿ ಸಾಯಿ | 43 |
| 54. | ಶಿರಡಿ ವಾಸನೆ | 43 |
| 55. | ಜೈ ಜೈ ಸಾಯಿರಾಂ | 44 |
| 56. | ಭಕ್ತಿಗೊಲಿವ ಸಾಯಿ | 45 |
| 57. | ಕೃಪೆಯ ತೋರಯ್ಯ | 46 |
| 58. | ಏಕ ಚಿತ್ತದಿ | 47 |
| 59. | ಸಪ್ತಶರಧಿಯೊಳು | 48 |
| 60. | ಆರಯ್ಯ ಏನ ಕಾಯ್ವರು | 49 |
| 61. | ಶಿವಾ... ಶಂಕರ | 50 |
| 62. | ಕರುಣಾಳು ಶಿವನೆ | 51 |
| 63. | ಬಾರಯ್ಯ ಶಂಕರ | 51 |

| ಕ್ರ.ಸಂ. | ಶೀರ್ಷಿಕೆ | ಪುಟ ಸಂಖ್ಯೆ |
|---|---|---|
| 96. | ದಯೆತೋರೆ ಇಷ್ಟು | 79 |
| 97. | ಮನತುಂಬಿ ನಿಂತಿರುವ | 79 |
| 98. | ಮಾತಾಡು ಮಾತಾಡು | 80 |
| 99. | ನಿನ್ಹೊಳಿನ್ನ | 81 |
| 100. | ಏಳಮ್ಮತಾಯಿ | 82 |
| 101. | ತಂದೆ ತಾಯಿ | 83 |
| 102. | ಮಮತಾಮಯಿ | 83 |
| 103. | ಜಯಜಯ ಭಗವತಿ | 84 |
| 104. | ಬರಬಾರದೇನಮ್ಮ | 85 |
| 105. | ಮಾಯಗಾರ್ತಿ | 86 |
| 106. | ಚೆಂಮುಳ್ಳಿ ಚೆಲುವಿ | 87 |
| 107. | ಮುತ್ತಂಥ ಎರಡಕ್ಷರ | 88 |
| 108. | ಉಧೋ ಉಧೋ ಎಲ್ಲಮ್ಮ | 89 |
| 109. | ಮಲಗುವಾಗ ಅಮ್ಮ | 90 |
| 110. | ಬಂದಾಳೊ ಬಂದಾಳೊ | 91 |
| 111. | ಹೋಗುವಾ ಬನ್ನಿರಿ | 92 |
| 112. | ತೋಂ ತೋಂ ಎಲ್ಲಮ್ಮ | 93 |
| 113. | ಏಕಮ್ಮ ಈ ಶೋಧ | 94 |
| 114. | ತುತ್ತನಿಕ್ಕಿ ಎತ್ತಿಕೊ | 95 |
| 115. | ಕಣ್ಣೀರ ಕಂಡರೆ ನೋಯುವಳು | 96 |
| 116. | ಏನಮ್ಮ ಆದಿಶಕ್ತಿ | 97 |
| 117. | ಅಪರಾಧ ಮನ್ನಿಸು | 98 |
| 118. | ಪಾಪವೆಲ್ಲವಾ ತೊಳೆಯಮ್ಮ | 99 |
| 119. | ಭಕ್ತರಾಗೋಣ | 99 |
| 120. | ಆನಂದ ಆನಂದ | 100 |
| 121. | ನಿನ್ನಿಂದಲೇ ಸ್ಥಾನ | 100 |
| 122. | ಜಗದಾದಿ ಶಕ್ತಿ | 101 |
| 123. | ಹೇ ಪರಮೇಶ್ವರಿ | 102 |
| 124. | ಓಂ ಶಕ್ತಿ | 103 |
| 125. | ಪಾಹಿ ನಮೋಪರಿಪಾಹಿ | 103 |
| 126. | ಜಯಮಂಗಳಂ | 105 |
| 127. | ಜಯತು ಜಯತು | 105 |



## ಪ್ರಣಮಾಮ್ಯಹಂ

ಪ್ರಣಮಾಮ್ಯಹಂ। ಪ್ರಣವ ಸ್ವರೂಪ ।
ಪ್ರಮಥಾದಿ ಸರ್ವ। ಪ್ರಥಮ ವಂದ್ಯ ಚರಿತ ॥ ಪ್ರ ॥

ಗೌರೀ ಸಂಜಾತ। ಮೋದಕ ಪ್ರೀತ ।
ವೇದ ಶಾಸ್ತ್ರವಿನುತ । ಸಕಲ ವಿದ್ಯ ಭರಿತ ॥ ಪ್ರ ॥

ಸುರಗಣ ಪ್ರಖ್ಯಾತ । ಚಂದ್ರ ಗರ್ವ ಘಾತ।
ಸಿದ್ಧಿ ಬುದ್ಧಿ ದಾತಾ । ನಮಿಪೆವೈ ಗಣನಾಥ ॥

॥ ಪ್ರಣಮಾಮ್ಯಹಂ । ಪ್ರಣವಸ್ವರೂಪ ॥

## ವಿನಾಯಕ ವಿನಾಯಕ

ವಿನಾಯಕ । ವಿನಾಯಕ।
ವಿಘ್ನರಾಜ ಪ್ರಭು ಗಣನಾಯಕಾ।
ವಿನಾಯಕಾ... ವಿನಾಯಕಾ...।
ವಿಘ್ನರಾಜ ಪ್ರಭು ಶುಭದಾಯಕಾ ॥ವಿ॥

ಪೊಗಳಲಿ ಎಂತೋ ನಿನ್ನಯ ಮಹಿಮೆಯ।
ಮುದ್ದುಗಣೇಶನೆ ಫಲದಾಯಕಾ ॥ವಿ॥

ಭಾದ್ರಪದ ಮಾಸದ ಚೌತಿಯ ದಿನದೊಳು।
ನಿನ್ನ ವೈಭವಕೆ ಎಣೆಯುಂಟೇ ॥ವಿ॥

ಎಲ್ಲ ಕಾಲದೊಳು ಎಲ್ಲ ಕಾರ್ಯದೊಳು।
ಎಲ್ಲರಿಂದ ಪೂಜೆಯ ಗೊಳುವೇ ||ವಿ||

ಗಣನಾಯಕಾ... ಶುಭದಾಯಕಾ....।
ಪೊರೆಯೋ ವರಸಿದ್ಧಿ ವಿನಾಯಕಾ||

## ಏಕದಂತನೆ

ಏಕದಂತನೆ ವಿಘ್ನರಾಜನೆ। ಗಜಮುಖ ಹೇ ಲಂಬೋದರ ।
ವಿಘ್ನಹರಾ.. ವಿಘ್ನಹರಾ। ಜಯತು ಜಯತು ವಿಘ್ನೇಶ್ವರಾ ||ಪ||

ಸಿದ್ಧಿ ಬುದ್ಧಿಯರ ನೀನು ವರಿಸುತ।
ವಿದ್ಯ ಬುದ್ಧಿಯಾ ನಮಗೆ ನೀಡುತ।
ಬಾಳ ಬೇಗೆಯಾ ನೀನು ಕಳೆಯುತ।
ಕಾಯೊ ಬೇಕೊ ಪ್ರಭು ನೀನು ಹರಸುತ ||

ಕಡುಬು ಕಜ್ಜಾಯ ನಿನಗೆ ನೀಡುವೆ।
ಪಂಚಾಮೃತ ಅಭಿಷೇಕ ಗೈಯ್ಯುವೆ।
ಹುಲ್ಲುಗರಿಕೆಯಾ ಪೂಜೆ ಮಾಡುವೆ।
ನನ್ನದೆಲ್ಲ ನಿನ್ನ ಪಾದಕರ್ಪಿಸುವೆ ||

ಉರಗ ಭೂಷಣನೆ ನೀಡೊ ಸುಜ್ಞಾನ ।
ಮೂಷಿಕ ವಾಹನ ಕಳೆಯೊ ಅಜ್ಞಾನ ।
ಪಾಶಾಂಕುಶಧರ ಬಿಡಿಸೊ ಕಾಮನ ।
ಒಪ್ಪಿಕೊ ಗಣಪನೆ ನನ್ನ ತನುಮನ ||

# ನಮ್ಮಪ್ಪ ಗಣಪನೇ ಬಾರೋ

ನಮ್ಮಪ್ಪ ಗಣಪನೇ ಬಾರೋ। ಶ್ರೀ ಮುದ್ದುಕರಿವದನ ಬಾರೋ।
ಹೇರಂಭ ವಿಘ್ನೇಶ ಬಾರೋ। ವಿಶ್ವವಂದಿತ ಪೂಜ್ಯ ಬಾರೋ।

ನಮ್ಮಪ್ಪ ಗಣಪನೇ ಶ್ರೀಮುದ್ದುಕರಿವದನ।
ಹೇರಂಭ ವಿಘ್ನೇಶ ಬಾರೋ। ಈ ಮಹಿಗೆ ಶುಭವನ್ನು ತಾರೋ ॥
ಬಾರೋ ... ಬಾರೋ... ಬಾರೋ... ಈ ಮಹಿಗೆ ಶುಭವನ್ನು ತಾರೋ

ಅಡಿಗಡಿಗೆ ವಿಘ್ನಗಳು । ಗುಡುಗುಡುಗಿ ಬರುತಿಹುದು।
ಕಡಿಕಡಿದು ಜಯವನ್ನು ತಾರೋ।
ಕರುಣಾಳು ಸದ್ಗತಿಯ ತಾರೋ। ಬಾರೋ ಬಾರೋ ಬಾರೋ.
ಈ ಮಹಿಗೆ ಶುಭವನ್ನು ತಾರೋ ॥ನ॥

ಕಡೆಹಾಯಿಸುತ ವರವ । ನಿರುತ ಚಿನ್ಮಯ ಸುಖವ ।
ಕೊಡುವ ಲಂಬೋದರನೆ ಬಾರೋ।
ವಿದ್ಯ ಬುದ್ಧಿಯ ನಮಗೆ ತಾರೋ। ಬಾರೋ ಬಾರೋ ಬಾರೋ
ಈ ಮಹಿಗೆ ಶುಭವನ್ನು ತಾರೋ ॥ನ॥

ಲಗ್ನ ಶುಭ ಕಾರ್ಯಗಳು । ಭಗ್ನವಾಗದ ರೀತಿ।
ವಿಘ್ನನಾಶನೆ ವಿಜಯ ತಾರೋ।
ಆದಿಪೂಜಿತ ಗಣಪ ಬಾರೋ। ಎಲ್ಲರಿಗು ಶುಭವನ್ನು ತಾರೋ।
ಬಾರೋ ಬಾರೋ ಬಾರೋ। ಈ ಮಹಿಗೆ ಶುಭವನ್ನು ತಾರೋ॥

॥ ನಮ್ಮಪ್ಪ ಗಣಪನೆ ॥

# ಗಣಪತೀ ಗಣಪತಿ

ಗಣಪತೀ ಗಣಪತೀ। ಗಣಗಳಿಗೆ ನೀ ಅಧಿಪತಿ॥

ಗಂ ಗಂ ಗಣಪತಿ ಗರಿಕ ಪ್ರಿಯ ।
ಶಂ ಶಂ ಶಂಕರ ಪ್ರಿಯತನಯ ।
ಲಂ ಲಂಬೋದರ ಲೋಕ ಪ್ರಿಯ ।
ಓಂಕಾರಾ ಗಜಮುಖ ಸದಯ ॥ಗಣ॥

ಗ್ಲೌಂ ಗೌರೀಸುತ ವಿನಾಯಕ ।
ಶ್ರೀಂ ಲಕುಮೀಕರ ವರದಾಯಕ ।
ಕ್ಲೀಂ ಕಲ್ಯಾಣ ಮಂಗಳದಾಯಕ ।
ಓಂ ಹ್ರೀಂ ಪ್ರಣವಾಕ್ಷರ ಸುಮುಖ ॥

॥ ಗಣಪತೀ ಗಣಪತೀ । ಗಣಗಳಿಗೆ ನೀ ಅಧಿಪತಿ ॥

# ಗಣಪತಿ ನಿನ್ನ ಮಹಿಮೆ

ಗಣಪತಿ ನಿನ್ನ ಮಹಿಮೆಯೆ ಚೆನ್ನ ।
ಸೊಂಡಿಲ ಗಣಪನೆ ಬಾರೋ। ಮುದ್ದು ಗಣೇಶನೆ ಬಾರೋ॥

ಗಣಪತಿ ಬಪ್ಪ ಮೋರ್ಯ। ಮಂಗಳ ಮೂರ್ತಿ ಮೋರ್ಯ॥
ಲಂಬೋದರನೆ ಮೋರ್ಯ। ಅಂಬಾ ಸುತನೆ ಮೋರ್ಯ॥

ಅಷ್ಟ ಸಿದ್ಧಿಗಳೊಡಗೂಡುತ ಬಾರೋ।
ಅಷ್ಟ ಮದಗಳಾ ಅಳಿಸುತ ಬಾರೋ।
ದುರಿತ ದುಃಖಗಳಾ ದಹಿಸುತ ಬಾರೋ।
ಮುದ್ದುಗಣೇಶನೆ ಓಡಿಬಾರೋ ... ಓಡಿ ಬಾರೋ ॥ಗಣ॥

॥ ಗಣಪತಿ ಬಪ್ಪ ಮೋರ್ಯ। ಮಂಗಳ ಮೂರ್ತಿ ಮೋರ್ಯ॥

ಅಂಬಾಸುತ ಅಗಜಾನನ ಸುಮುಖನೆ।
ಅಮಿತಕಲಾ ಪರಿಪೂರಣ ಭರಿತನೆ।
ಆಶ್ರಿತಜನ ಪರಿಪಾಲ ವಿಘ್ನೇಶನೆ ।
ಅಯ್ಯಪ್ಪ ಷಣ್ಮುಖಿ ಸೋದರ ಪ್ರಣವನೆ ॥

ಗಣಪತಿ ಬಪ್ಪ ಮೋರ್ಯಾ। ಮಂಗಳ ಮೂರ್ತಿ ಮೋರ್ಯಾ।
ಲಂಬೋದರನೆ ಮೋರ್ಯಾ। ಅಂಬಾಸುತನೆ ಮೋರ್ಯಾ॥

## ಮುದ್ದುಗಣೇಶನೆ

ಮುದ್ದುಗಣೇಶನೆ ಬಾರೋ।
ನಿಂಗೆ ಮೋದಕ ಕೊಡುವೆನು ಬಾರೋ।
ಮೋದಕ ತಿಂದು ಮೋದದಿ ಕುಣಿದು।
ಮುದದಿಂದ ಹರಸುತ್ತ ಬಾರೋ.... ॥ಮು॥

ಸೊಂಡಿಲ ತೂಗುತ ಬಾರೋ।
ಪುಟ್ಟ ಹೆಜ್ಜೆಯ ಹಾಕುತ ಬಾರೋ।
ಘಲಿ ಘಲಿರೆನ್ನುವ ಗೆಜ್ಜೆಯ ನಾದದಿ।
ಮಕ್ಕಳ ಕುಣಿಸುತ್ತ ಬಾರೋ....॥ ॥ಮು।

ಕಡುಬು ಕಜ್ಜಾಯ ಎಳ್ಳುಂಡೆ ಒಬ್ಬಟ್ಟು।
ಹೂರಣ ಕಾದಿದೆ ಬಾರೋ।
ಕಬ್ಬಿನ ರಸ ಹೀರಿ । ಒಳ್ಳೆದಾರಿಯ ತೋರಿ।
ಸದ್ಗತಿ ನೀಡಲು ಬಾರೋ ॥ ॥ಮು।

ಪಟ್ಟೆ ಜನಿವಾರ । ಹೊಟ್ಟೆಸುತ್ತಿದ ನಾಗ।
ಪಟ್ಟು ಪೀತಾಂಬರ । ಉಟ್ಟುಬಾರೋ।
ಗುಟ್ಟಾಗಿ ನೈವೇದ್ಯ ಪಟ್ಟಾಗಿ ತಿಂದು ।
ಮೂಷಿಕ ವೇರುತ್ತ ಬಾರೋ ॥ ॥ಮು।





# ಸುಬ್ರಹ್ಮಣ್ಯ ಪ್ರಭೊ

ಸುಬ್ರಹ್ಮಣ್ಯ ಪ್ರಭೊ। ಜಯ ಜಯ । ಸುಬ್ರಹ್ಮಣ್ಯ ಪ್ರಭೋ।
ರೋಗ ನಿವಾರಕ ಸಂತತಿಕಾರಕ ।
ನಿನ್ನಯ ನಾಮವೆ ಮುಕ್ತಿಗೆ ತಾರಕ ॥ ಸುಬ್ರಹ್ಮಣ್ಯ ॥ ॥ ಪ ॥

ಭವದಲಿ ಬೀಳ್ವರೊ ನಿನ್ನ ಮರೆಯಲು ।
ಭುವನವೆ ಗೆಲುವರೊ ನೀನು ಒಲಿಯಲು ।
ಬಾಳಲಿ ನಲಿವರೊ ನಿನ್ನ ಸ್ಮರಿಸಲು ।
ಕಾಲನ ಗೆಲುವರೊ ನೀನು ಹರಸಲು ॥ ಸುಬ್ರಹ್ಮಣ್ಯ॥

ಚಂದನ ಕಸ್ತೂರಿ ಅರಿಶಿನ ಗಂಧದಿ ।
ಪಂಚಾಮೃತ ಅಭಿಷೇಕದಿ ಅರ್ಚಿಸಿ।
ಈಶ ಸುತನೆ ಬಾ ಗಣೇಶ ಸೋದರ ।
ಎಂದು ಮೊರೆಯಿಡಲು ಆಲಿಸಿ ಮೊರೆಯ।

ತೂಗುವನೊ ತಲೆದೂಗುವನೊ। ಆಡುವನೊ ನಲಿದಾಡುವನೊ।
ನಲಿದಾಡಿ ಕುಣಿಯುವನೊ। ದಯ ಮಾಡಿ ಹರಸುವನೊ।
ಕುಲ ಕಾಯ್ದು ಸಲಹುವನೊ। ಭಕ್ತರ ಬಂಧು ತಾನಿವನೊ।
ದುಷ್ಟರ ಕಾಡುವನೊ। ಮನದಿಷ್ಟವ ನಡೆಸುವನೊ।
ಅನುಗಾಲ ನೆನೆಯುವರ ಕ್ಷೇಮಕಾಗಿ ।
ಸುತ್ತ-ಮುತ್ತ ತಿರುಗುತಿಹನೊ ॥ ॥ಸುಬ್ರಹ್ಮಣ್ಯ॥

## ಸುಬ್ರಹ್ಮಣ್ಯ ಸನ್ನಿಧಿಗೆ

ಸುಬ್ರಹ್ಮಣ್ಯ ಸನ್ನಿಧಿಗೆ ಒಮ್ಮೆ ಬಂದು ನೋಡು।
ಒಮ್ಮೆ ಬಂದು ನೋಡೂ।
ಭಕ್ತಿಯಿಂದ ಭಜಿಸುತಲಿ । ಅವನ ಸೇವೆ ಮಾಡು ||ಪ||

ಶಿವನ ಸುತನು ಷಣ್ಮುಖನು ನೆಲಸಿದಂತ ಬೀಡು ।
ಕುಕ್ಕೆ ಸುಬ್ರಹ್ಮಣ್ಯನಾಗಿ ಇಲ್ಲಿ ನೆಲಸಿಹ ನೋಡು।
ಕಾಯ ವಾಚ ಮನಸ ಅವನ ಚರಿತೆಯನ್ನು ಹಾಡು।
ಚರಿತೆಯನ್ನು ಹಾಡು|| ||ಸು||

ಅಂಬೆಯ ಪುತ್ರ ಅನಂತ ಚರಿತ್ರ । ಎಂಥಾ ಸುಂದರ ನೋಡು।
ಸ್ಕಾಂದ ಪುರಾಣದಿ ಲೋಕವ ಬೆಳಗಿದ। ಮಹಾಮಹಿಮನ ಬೇಡು||
ಹರಕೆಯ ನೀಡುತ । ನೇಮದಿ ನಡೆಯುತ । ದೀನನಾಗಿ ಬೇಡು।
ನಿನ್ನಯ ಹೊರತು ಅನ್ಯರ ಕಾಣೆನು। ಎನ್ನುತ ಅವನಲಿ ಬೇಡು ||ಸು||

ನವಿಲನೇರಿ ವೇಲಾಯುಧ ಹಿಡಿದು। ಜಗವನು ತಿರುಗಿಹ ನೋಡು।
ಕುಲವನು ಸಲಹುವ। ದೋಷವ ಕಳೆಯುವ। ಕಾರ್ತಿಕೇಯನ ಬೇಡು।
ತಾರಕಾಂತಕ ದೇವಸೇನ । ಶ್ರೀವಳ್ಳೀಕಾಂತನ ನೋಡು।
ಕುಕ್ಕೆ ಕ್ಷೇತ್ರದಿ ನೆಲಸುತ ಭಕ್ತರ। ಕಷ್ಟವ ಕಳೆಯುವ ನೋಡು।
ಮುಕ್ತಿಯ ಅವನಲಿ ಬೇಡು||

|| ಸುಬ್ರಹ್ಮಣ್ಯ ಸನ್ನಿಧಿಗೆ||

## ಕರುಣಾಳು ಬಾ ಮುರುಗ

ಕರುಣಾಳು ಬಾ ಮುರುಗ । ಮುಕ್ತಿಯ ನೀಡಲು।
ಕರುಣಾಳು ಬಾ ಮುರುಗ ||ಪ||

ಎನಿತು ಧನ್ಯರೊ ನಿನ್ನ ಸ್ಮರಿಸುವರು।
ಎನಿತು ಮಾನ್ಯರೊ ನಿನ್ನ ನುತಿಸುವರು।

ಎನಿತು ಗಣ್ಯರೊ ನಿನ್ನ ಸೇವಿಸುವರು।
ಎನಿತೆನಿತು ಪುಣ್ಯರೊ ನಿನ್ನ ನರ್ಚಿಪರು ॥ ||ಕ||

ಭಾಗ್ಯ ವಿಧಾತನೆ ಬಾ। ಸಂತತಿಕಾರನೆ ಬಾ।
ರೋಗ ನಿವಾರಕ ಬಾ। ಕರುಣಾಸಾಗರ ಬಾ
ಬಾ ಬಾ ಬಾ ..... ಬಾ ಮುರುಗ ||ಕ||

ಕಾಯವಾಚ ಮನಸಾ। ನಿನ್ನ ನಂಬಿ ಬಂದೆ ಬಾರೊ ।
ಪ್ರೇಮದಿಂದ ಭಜಿಪೆ। ನಿನ್ನ ಮುದ್ದು ಮುಖವ ತೋರೊ ।
ನಾಗರಾಜ ಬಾರೋ। ಪುಂಗಿನಾದ ಪ್ರಿಯನೆ ಬಾರೊ ।
ಆದಿಶೇಷ ಬಾರೋ। ನಾಟ್ಯಗಾನ ಲೋಲ ಬಾರೊ ।
ಬಾ ಬಾ ಬಾ .... ಬಾ ಮುರುಗ॥ ||ಕ||

ಎನಿತು ಜನ್ಮದಲೊ ಮಾಡಿದ ಪಾಪ।
ಬಂದಿಹೆ ಭುವಿಗೆ ಹರಿಸುನೀ ತಾಪ।
ದೀನರ ಮೇಲೆ ಬೇಡಯ್ಯ ಕೋಪ।
ಶರವಣ ಭವ ದೇವ ಕಾಯೊ ಪ್ರದೀಪ ||ಕ||

## ಸುಬ್ರಹ್ಮಣ್ಯ ನಾಗರಾಜ

ಸುಬ್ರಹ್ಮಣ್ಯ ನಾಗರಾಜ। ವಲ್ಲೀನಾಥ ಬಾರೋ।
ಘಾಟೀ ವಾಸ। ಕುಕ್ಕೇವಾಸ। ಪಳನೀ ವಾಸ ಬಾರೊ।
ಆರು ಬೆಟ್ಟದ ಒಡೆಯ ಸ್ವಾಮಿ। ಆರಾಧಿಸುವೆ ಬಾರೋ ||ಪ||

ತನುಮನವೆಲ್ಲಾ ತನಿಯ ನೆರೆಯುವೆ।
ಜ್ಞಾನದ ನಿಧಿಯ ತೋರೊ।
ಷಣ್ಮುಖನಾಗಿ ಷಡ್ವರ್ಗವನು।
ಜಯಿಸುವ ಶಕ್ತಿಯ ತಾರೋ ||ಸು||

ಪಂಚಾಮೃತ ಅಭಿಷೇಕದಿ. ಪೂಜಿಪೆ।
ಪಳನಿ ವಾಸನೆ ಬಾರೊ।

ಪಂಚೇಂದ್ರಿಯಗಳ ಶುದ್ಧಿಯ ಮಾಡಲು।
ಪನ್ನಗ ಸ್ವಾಮಿಯೆ ಬಾರೋ॥

ಸ್ಕಂದ ಕುಮಾರನೆ ಸತ್ಯದ ಪಥದಿ
ನಡೆಯುವ ಮನವನು ತಾರೊ।
ನಾಗರಾಜನೆ ನಾಗದೋಷವ
ಕಳೆಯುತ ಸದ್ಗತಿ ತೋರೋ

ಚಿಗುಳಿಯ ತಿಂದು ಚಂಚಲ ಚಿತ್ತದ
ಚಪಲವ ಕಳೆಯುತ ಬಾರೊ।
ಅರಳನು ಸೇವಿಸಿ ಅರಳಿದ ಮನದಲಿ
ಆತ್ಮ ಜ್ಯೋತಿಯ ತೋರೊ

ಪರೊಪರ ಪರಕೆಗೆ । ಪರುಷದಿ ಪರಸುವ।
ಹರಗೌರೀ ಸುತ ಬಾರೊ
ವೇಲ್ ವೇಲ್ ಮುರುಗ। ವೇಲಾಯುಧಧರ
ವಂದಿಪೆ ಚರಣಕೆ ಬಾರೋ ....
ನಾಗರಾಜನೇ.... ಬಾರೋ। ವಲ್ಲಿನಾಥನೇ ಬಾರೋ॥





# ಮೋಹಿನಿ ಸುತನೂ

ಮೋಹಿನಿ ಸುತನೂ ... ಮಂಗಳ ರೂಪನು।
ಪಂದಳ ಕುವರನೂ ಅಯ್ಯಪ್ಪಾ ।
ಮಹಿಷಿಮರ್ದನನೂ ... ಘನ್ನ ಮಹಿಮನೂ ।
ಈ ಮಣಿಕಂಠನೂ ... ಅಯ್ಯಪ್ಪಾ.....॥

॥ಅಯ್ಯಪ್ಪಾ ಶರಣಂ ಅಯ್ಯಪ್ಪಾ । ಅಯ್ಯಪ್ಪಾ ಶರಣಂ ಅಯ್ಯಪ್ಪಾ॥

ತಾಯಣತಿಯ ಕಂಡು। ಹುಲಿಯ ನೇರುತ ಬಂದು।
ಹಾಲಾಹಲವ ಕಳೆದ ಅಯ್ಯಪ್ಪಾ।

ಶಬರಿ ಭಕ್ತಿಲಿ ನುಡಿದಾ। ಹದಿನೆಂಟು ಮಾತುಗಳೆ।
ಮುಕ್ತಿ ಸೋಪಾನ ವೆಂದಾ ಅಯ್ಯಪ್ಪಾ....।

॥ಅಯ್ಯಪ್ಪಾ ಶರಣಂ ಅಯ್ಯಪ್ಪ। ಅಯ್ಯಪ್ಪಾ ಶರಣಂ ಅಯ್ಯಪ್ಪಾ॥

ಜ್ಞಾನ ವೈರಾಗ್ಯದಿ ರಾಜ್ಯ ಭೋಗವ ಬಿಟ್ಟು।
ಗಿರಿಯಲಿ ನೆಲಸಿದ ಅಯ್ಯಪ್ಪ।
ನಾನಾ ಜನ್ಮದ ಪಾಪಗಳೆಲ್ಲವ ಕ್ಷಣದಲಿ।
ಸುಡುವನು ಅಯ್ಯಪ್ಪ।

ನಂಬಿದ ಭಕ್ತರ ಬೆಂಬಿಡದಲೆ ಕಾಯ್ವ।
ಕರುಣಾಮಯನು ಅಯ್ಯಪ್ಪಾ॥

ಶ್ರೀ ಗುರುಸ್ವಾಮಿಯ ದೀಕ್ಷೆಯ ಪಡೆಯಲು
ಸದ್ಗತಿ ಕೊಡುವನು ಅಯ್ಯಪ್ಪ ॥

॥ಅಯ್ಯಪ್ಪಾ ಶರಣಂ ಅಯ್ಯಪ್ಪ। ಅಯ್ಯಪ್ಪಾ ಶರಣಂ ಅಯ್ಯಪ್ಪಾ॥

# ಸ್ವಾಮಿ ಬರ್ತ್ತಾನೆ

ಸ್ವಾಮಿ ಬರ್ತ್ತಾನೇ ಅಯ್ಯಪ್ಪ ಬರ್ತ್ತಾನೆ।
ಗಜವನೇರಿ ಜಗವ ತಿರುಗಿ ಅಯ್ಯಪ್ಪ ಬರ್ತ್ತಾನೆ।
ಗಲ್ಲಿಗಲ್ಲಿಗೂ ಮೆರವಣಿಗೆ ಹೋಗ್ತಾನೆ।
ಭಕ್ತರೊಡನೆ ಕಷ್ಟಸುಖವ ಹಂಚಿಕೊಳ್ತಾನೆ ||ಸ್ವಾಮಿ||

ಕೊಂಬು ಕಹಳೆಯ ಡೋಲು ಮದ್ದಳೆ ಮೇಳದಿ||
ಭಜನೆ ಮಾಡ್ವ ಭಕ್ತರೊಡನೆ ಚೆಂದದಿ ಕುಣಿತಾನೆ

ಹದಿನೆಂಟು ಮೆಟ್ಟಲಾ ಗದ್ದುಗೆ ಏರಿ ಕುಳಿತಾನೆ।
ಗದ್ದುಗೆ ಏರಿ ಕುಳಿತು ದುಷ್ಟಗೆ ಬುದ್ಧಿ ಕಲಿಸ್ತಾನೆ|| ||ಸ್ವಾಮಿ||

ಭಸ್ಮ ವಿಭೂತೀ ಕರ್ಪೂರದಾರತಿ ಮಾಡಿ।
ತುಪ್ಪ ಬೆಲ್ಲ ವಿತ್ತರೆ ಸ್ವಾಮಿ ಹರ್ಷದಿ ತಿಂತಾನೆ ।

ಭಜನೆಗೊಲಿತಾನೇ ಭಕ್ತಿ ಭಾವ ಕೊಲಿತಾನೆ।
ಸ್ವಾಮಿ ಶರಣಂ ಎನುವ ಭಕ್ತರ ಕೂಡಿ ನಲಿತಾನೆ ||ಸ್ವಾಮಿ||

ಅಯ್ಯಪ್ಪ ಎನ್ನುವರಾ ಹಿಂದುಮುಂದು ತಿರುಗ್ತಾನೆ।
ಭಕ್ತರನ್ನು ಕಾಡುವರ। ಆನೆ ಕಾಲಲ್ಲಿ ತುಳಿಸ್ತಾನೆ ||ಸ್ವಾಮಿ||

ಕರ್ಮದ ಬುತ್ತಿಯ ಇರುಮುಡಿ ಕಟ್ಟಿ।
ಸ್ವಾಮಿಯ ಪಾದಕೆ ಎಲ್ಲವ ನಟ್ಟಿ ।
ಕಾಮ ಕ್ರೋಧವೆಂಬ ಕಲ್ಮುಳ್ಳ ತುಳಿದು
ಸ್ವಾಮಿಯೆ ಶರಣಂ ಎನ್ನುತ ನಡೆದು||
ಸ್ವಾಮಿಯೇ ಅಯ್ಯಪ್ಪಾ। ನಿನ್ನ ಪಾದಕೆ ಶರಣು ನನ್ನಪ್ಪಾ।

||ಸ್ವಾಮಿಯೇ ಶರಣಂ||

# ಅಯ್ಯಪ್ಪ ನಿನ್ನೊಡಲ

ಅಯ್ಯಪ್ಪ ನಿನ್ನೊಡಲ ಶಿಶುವಾಗಿ ಸ್ವೀಕರಿಸು।
ಸ್ವಾಮಿಯೇ ಕರುಣೆಯಿಂದ । ಅಯ್ಯಪ್ಪ -
ನಿನ್ನಡಿಯ ಹೂವಾಗಿ। ಚರಣದಲಿ ಸ್ವೀಕರಿಸು
ಬೇಡುವೆನು ಭಕ್ತಿಯಿಂದ । ಅಯ್ಯಪ್ಪ -
ನಡೆಯುವೆನು ನೇಮದಿಂದ
ಸ್ವಾಮಿಯೇ ಶರಣಂ .... ಶರಣುಮಯ್ಯಪ್ಪ ॥

ಪಂದಳ ಕುವರನೆ ಶಬರಿ ಗಿರಿಗೊಡೆಯನೆ
ಶರಣು ಬಂದೆನು ನಿನ್ನಲಿ। ಅಯ್ಯಪ್ಪ
ಕಾಣಲು ಭರದಿಂದಲೀ।
ಮನದ ಬಯಕೆಗಳೆಲ್ಲ ಇರುಮುಡಿಯಕಟ್ಟಿಟ್ಟು।
ಓಡಿ ಬಂದೆನು ನಿನ್ನಲಿ । ಅಯ್ಯಪ್ಪ
ಸಿರಿಮೊಗವ ತೋರೆನುತಲಿ ॥
ಸ್ವಾಮಿಯೇ ಶರಣಂ ಶರಣುಮಯ್ಯಪ್ಪ ॥

ಕಪ್ಪು ಬಟ್ಟೆಯನುಟ್ಟು। ಮನದ ಕಪ್ಪನು ಸುಟ್ಟು
ಶರಣು ಬಂದೆನು ನಿನ್ನಲಿ। ಅಯ್ಯಪ್ಪ
ಮುಕ್ತಿಯನು ನೀಡೆನುತಲಿ।
ಹುಲಿಯ ನೇರುತ ಬಂದು ಕಾಮಕ್ರೋಧವಕೊಂದು
ಕಾಪಾಡು ನನ್ನೊಡೆಯನೇ। ಅಯ್ಯಪ್ಪ
ಕಾಯದಿರೆ ನಾ ಬಿಡುವೆನೇ...?
ಸ್ವಾಮಿಯೇ ಶರಣಂ... ಶರಣುಮಯ್ಯಪ್ಪನೇ॥

# ಕರಿಯ ಬಟ್ಟೆಯನುಟ್ಟು

ಕರಿಯ ಬಟ್ಟೆಯ ನುಟ್ಟು। ಹಣೆಗೆ ಭಸ್ಮವ ನಿಟ್ಟು
ಕೊರಳೊಳು ರುದ್ರಾಕ್ಷಿ ಮಾಲೆ ತೊಟ್ಟು।
ಇರುಮುಡಿಯ ತಲೆಗಿಟ್ಟು ಜಯಘೋಷ ಮಾಡುವರು
ಅಯ್ಯಪ್ಪ ಸ್ವಾಮಿಯೇ। ಶರಣುಮಯ್ಯಪ್ಪನೆ॥
ಶರಣು ಶರಣಯ್ಯ ಗುರು ಕೋಟಿ ಶರಣು।
ಸ್ವಾಮಿಯೇ ಶರಣುಮಯ್ಯಪ್ಪ ॥ಪ॥

ಸ್ತ್ರೀ ಸಂಗವನು ಬಿಟ್ಟು ಚಾಪಲ್ಯವನು ಸುಟ್ಟು।
ಇಂದ್ರಿಯಾ ಸುಖಗಳಾ ಬದಿಯಲಿಟ್ಟು।
ಕರುಣಾಳು ನೀನೆಂದು ಮಣಿಕಂಠ ಕಾಯೆಂದು
ಅಡಿಗಡಿಗೆ ನಮಿಸುವರು ಕರುಣೆ ತೋರೆಂದು
ಅಯ್ಯಪ್ಪ ಸ್ವಾಮಿಯೇ.... ಶರಣುಮಯ್ಯಪ್ಪನೇ...॥

ಹದಿನೆಂಟು ಮೆಟ್ಟಲಿಗು ಹದಿನೆಂಟು ವ್ರತನೇಮ।
ಕರ್ಪೂರದಾರತಿಯ ಬೆಳಗುತಲಿ ಅಯ್ಯನಿಗೆ।
ಕಲ್ಲುಮುಳ್ಳುಗಳೆಲ್ಲ ಪಾದಕ್ಕೆಮೆಟ್ಟೆನುತ
ನಿನ್ನ ಕಾಣಲು ಭರದಿ ಓಡಿ ಬರುವರೊ ಅಯ್ಯ
ಅಯ್ಯಪ್ಪ ಸ್ವಾಮಿಯೇ..ಶರಣುಮಯ್ಯಪ್ಪನೇ...॥

ಜಾತಿಬೇಧದ ಹಂಗು ತೊರೆಯುತಲಿ ಶರಣೆನುತ।
ನಿನ್ನಡಿಗೆ ಎರಗುವರು ಎಲ್ಲ ಒಂದಾಗಿ।
ಸ್ವಾಮಿ ಶರಣಯ್ಯ ನೀನೇ ಗತಿಯು ಎನ್ನುತಲಿ।
ಒಪ್ಪಿಸಿಕೊ ಸನಕಾಯ ನಿನ್ನ ಪಾದಕೆನ್ನುತಲಿ॥
ಅಯ್ಯಪ್ಪ ಸ್ವಾಮಿಯೇ... ಶರಣಮಯ್ಯಪ್ಪನೇ...
ಶರಣು ಶರಣಯ್ಯ ಗುರು ಕೋಟಿ ಶರಣು॥
ಅಯ್ಯಪ್ಪ ಸ್ವಾಮಿಯೇ ಕೋಟಿ ಶರಣು।
ಪಂದಳ ಕುವರನೆ ಕೋಟಿ ಶರಣು।
ಶಬರಿಮಲೆ ವಾಸನೆ ಶರಣು ಶರಣು ॥

॥ಓಂ ಸ್ವಾಮಿಯೇ .... ಶರಣುಮಯ್ಯಪ್ಪ॥



## ಭಕ್ತಿಲಿ ನಿನ್ನ ಭಜಿಸುವೆ

ಭಕ್ತಿಲಿ ನಿನ್ನ ಭಜಿಸುವೆನಯ್ಯ । ಬಾರೊ ವೆಂಕಟೇಶ ।
ಬಾರೋ ವೆಂಕಟೇಶ । ಹರಿಸಯ್ಯಾ ಭವದ ಪಾಶ॥

ಬಾಯಾರಿದೆನೊ ಕೂಗುತ ನಿನ್ನ । ಬಾರೊ ಶ್ರೀನಿವಾಸ।
ದೀನರ ಮೇಲೆ ಕೋಪವದೇಕೊ । ತೋರೋ ಮಂದಹಾಸ ॥ಭಕ್ತಿ ॥

ಗೀತೆಯ ಬೋಧಿಸಿ ಲೋಕವ ಬೆಳಗಿದೆ। ನೀಡುತ ಜ್ಞಾನ ಸಂದೇಶ।
ಹದಿನೆಂಟಧ್ಯಾಯದೊಳು ಮುಕ್ತಿ ರಹಸ್ಯವ ಸಾರಿದ ಶ್ರೀಷ ॥ಭಕ್ತಿ॥

ನಾರಿಯ ಮಾನವ ಕಾಯುತದನುಜರ। ವಧಿಸಿದ ಹೇ ಜಗದೀಶ।
ತಿರುಮಲೆವಾಸನೆ ಶ್ರೀವೆಂಕಟೇಶನೆ ಕಳೆಯೊ ಮನದ ಕ್ಲೇಶ ॥ ಭಕ್ತಿಲಿ ನಿನ್ನ ।

## ನಿನ್ನ ನಂಬಿ ಬಂದಿಹೆ

ನಿನ್ನ ನಂಬಿ ಬಂದಿಹೆನೊ ಶ್ರೀನಿವಾಸ ।
ಬೆಂಬಿಡದೆ ಕಾಯಬೇಕೊ ವೆಂಕಟೇಶ ।
ಕುಂದುಕೊರತೆಗಳ ನೀಗೋ ಲಕ್ಷ್ಮೀಶ ।
ತಂದೆ ತಾಯಿ ಎಲ್ಲ ನೀನೆ ತಿರುಮಲೇಶಾ ॥ನಿನ್ನ॥

ಬೆಟ್ಟಗಳ ಸುತ್ತಿಬಂದೆ ನಿನ್ನ ಕಾಣಲು।
ಅಟ್ಟಿಬರುವ ಅರಿಯಬಾಧೆಯನ್ನು ತಡೆಯಲು।
ಮುತ್ತಿಬರುವ ಕುತ್ತುಗಳ ಮೆಟ್ಟಿ ಕಾಯಲು।
ಓಡಿ ಬಾರೊ ವೆಂಕಟೇಶ। ತಿರುಮಲೇಶ ॥

ಶ್ರೀನಿವಾಸಾ... ವೆಂಕಟೇಶಾ...
ವೆಂಕಟೇಶಾ.... ತಿರುಮಲೇಶಾ ... ||ನಿನ್ನ||

ನೂರಾರು ಹರಕೆ ಹೊತ್ತೆ ನಿನ್ನ ಚರಣದಿ।
ತಿರುಗಿ ತಿರುಗಿ ಸೋತು ಹೋದೆ ಜನನ ಮರಣದಿ ।
ಇನ್ನಾದರು ಮುಕ್ತಿ ನೀಡೊ ಈ ಜನುಮದೀ।
ಓಡಿ ಬಾರೊ ವೆಂಕಟೇಶ। ತಿರುಮಲೇಶ ||

ಶ್ರೀನಿವಾಸಾ... ವೆಂಕಟೇಶಾ...
ವೆಂಕಟೇಶಾ... ತಿರುಮಲೇಶಾ.... ||ನಿನ್ನ||

## ಬಾರಯ್ಯ ಶ್ರೀನಿವಾಸ

ಬಾರಯ್ಯಾ ಶ್ರೀನಿವಾಸ। ಎನ್ನಹೃದಯ ದೇಗುಲಕೆ।
ನಿನ್ನ ನೋಡಿ ಧನ್ಯನಾಗೋ । ಭಾಗ್ಯ ನೀಡೊ ಜೀವಕೆ ||ಪ||

ನನ್ನ ನಿನ್ನ ನಡುವೆ ಇರುವಾ । ಮುಸುಕು ಏಕೊ ತೆರೆಯಾಲಿಲ್ಲ ।
ಭಿನ್ನ ಭಾವದಿಂದ ಮನವು । ದ್ವಂದ್ವದಿಂದ ಕೂಡಿದೆಯಲ್ಲ।
ದಾರಿಯಾವುದಿದೆಯೊ ಏನ್ನೋ । ಎನಗೆ ಇನ್ನು ಕಾಣಲಿಲ್ಲ ।
ಶ್ರೀನಿವಾಸ ನಿನ್ನ ಒಲಿಸೋ । ಭಾಗ್ಯವಿನ್ನು ದೊರೆಯಾಲಿಲ್ಲ ||ಬಾ||

ಅಂತರಂಗವಿನ್ನು ನಿನ್ನಾ । ಚರಣ ಭೃಂಗವಾಗಲಿಲ್ಲ ।
ಸಂತರ ಸಹವಾಸದಿಂದ । ಮನವು ಶುದ್ಧಿಯಾಗಲಿಲ್ಲ ।
ಚಿಂತೆ ಎಲ್ಲ ಬಿಟ್ಟು ಇರಲು । ಕರ್ಮವಿನ್ನು ಮುಗಿಯಲಿಲ್ಲ।
ಶ್ರೀನಿವಾಸ ಎಲ್ಲಾ ನಿನದೇ । ಎನುವ ಅರಿವು ಮೂಡಲಿಲ್ಲ ||ಬಾ||

ಶ್ರೀನಿವಾಸ ನಿನ್ನಾ ಚರಣ । ಸೇವ ಭಾಗ್ಯ ನೀಡೋ ಹರಿಯೆ ।
ವೆಂಕಟೇಶ ನಿನ್ನ ಸ್ಮರಣ । ಪುಣ್ಯ ನೀಡೊ ನನ್ನಾ ದೊರೆಯೆ ।
ತಿರುಮಲೇಶ ನೀನೇ ಗತಿಯು । ಸದ್ಗತಿಯಾ ನೀಡೋ ಪ್ರಭುವೆ।
ಗೋವಿಂದ ನಿನ್ನ ಪಾದ । ಧೂಳಿಯಾಗಿ ಇರಿಸೋ ವಿಭುವೆ ||ಬಾ||

# ತಂದೆ ನೀ ನಾದೊಡೆ

ತಂದೆ ನೀನಾದೊಡೆ। ಬಂಧು ನೀನಾದೊಡೆ
ನೀಕಾಣ ಬೇಕೋ ... ಗೋವಿಂದಾ ...।
ಗೋವಿಂದಾ .. ಹರಿ ಗೋವಿಂದಾ
ಕೈಹಿಡ ಬೇಡವೋ ಮುಕುಂದಾ॥

ಹತ್ತಾವತಾರವ ಎತ್ತಿದ ದೊರೆಯೆ।
ಹತ್ತೆಂಟು ಲೋಕವ ಕಾಯುವ ನಿಧಿಯೆ।
ಹದಿನೆಂಟಧ್ಯಾಯದಿ ಗೀತೆಯ ಬೋಧಿಸಿ।
ಆತ್ಮನ ತೋರಿದ ಹರಿಯೆ। ಭವಸಿರಿಯೆ॥
॥ಗೋವಿಂದಾ ಹರಿ ... ಗೋವಿಂದಾ॥

ಪದ್ಮಾವತೀಪತಿ ಶ್ರೀ ಲಕ್ಷ್ಮಿಯರಸ।
ಭಕ್ತರ ಹೃದಯವೆ ನಿನ್ನ ನಿವಾಸ।
ತಿರುಮಲ ತಿರುಪತಿ ವೈಕುಂಠವಾಸ।
ಪರುಶನ ನೀಡಯ್ಯ ಹೇ-ಶ್ರೀನಿವಾಸ।
॥ಗೋವಿಂದಾ ಹರಿ ಗೋವಿಂದಾ॥

ಕಾಡುವ ಭೂತವ ಗದೆಬೀಸಿ ದೂಡೋ।
ಶಂಖನಾದ ದಿಂದ ಶಂಕೆಯ ದೂಡೋ।
ಗರ್ವದಿ ಮೆರೆಯುವ ಮನವನ್ನು ಚಕ್ರದಿ।
ಸೀಳುತ್ತ ಪಾದದಿ ಜಾಗವ ನೀಡೋ॥
॥ಗೋವಿಂದಾ ಹರಿ ... ಗೋವಿಂದಾ॥

ಭಕ್ತರು ಕೂಗಲು ಓಡೋಡಿ ಬರುವೆ।
ಭಜನೆಗೆ ಮೈಮರೆತು ಹರುಷದಿ ಕುಣಿವೆ।
ವೈಕುಂಠದಿಂ ಬಂದು। ಭೂಲೋಕದಲಿ ನಿಂದು।
ಭಕ್ತರ ಕಾಯ್ವಂತ। ಹರಿಯೆ। ಭವಸಿರಿಯೆ॥

ಗೋವಿಂದಾ ... ಹರಿ । ಗೋವಿಂದಾ
ಕೈಬಿಡ ಬೇಡವೊ ಮುಕುಂದಾ।
ಗೋವಿಂದಾ ಹರಿ ಗೋವಿಂದಾ
ಮುಚುಕುಂದ ವರದಾ ಗೋವಿಂದಾ॥

## ವೆಂಕಟರಮಣನೆ

ವೆಂಕಟ ರಮಣನೆ ಬಾರೋ।
ಸಂಕಟ ಹರಣನೆ ಬಾರೋ।
ಕರುಣಾ ಸಾಗರ ಬಾರೋ।
ಲಕ್ಷ್ಮೀ ರಮಣನೆ ಬಾರೋ ॥ಪ॥

ಭವದಲಿ ಮುಳುಗಿದೆ ನಲ್ಲೋ...।
ಕಾಯುವರಾರೆನ ಗಿಲ್ಲೋ।
ನೀ ಮುನಿದರೆ ಬಾಳಿನ್ನೆಲ್ಲೋ...।
ನೀ ಒಲಿಯದೆ ಸುಖವಿನ್ನೆಲ್ಲೋ .... ॥ವೆಂಕಟ॥

ಕಲಿತಾ ಕುಣಿದಿಹ ನಿಲ್ಲೀ....।
ಧರ್ಮಕೆ ತಾವಿನ್ನೆಲ್ಲೀ....।
ಮನದಲಿ ಭೀತಿಯ ಚೆಲ್ಲೀ....।
ಜವ ನಿಂತಹ ಕಣ್ಣೆದುರಲ್ಲೀ... ॥ವೆಂಕಟ॥

ಸ್ಥಿರ ಚಿತ್ತದಿ ನಿಲಿಸೋ ಮನವಾ ।
ನಿನ್ನ ಸೇವೆಯಲಿರಿಸೋ ತನುವಾ ।
ತೋರೋ ನಿನ್ನಯ ಒಲವಾ ।
ನೀ ನೀಡೋ ಶಾಂತೀ ಸುಖವಾ ... ॥ವೆಂಕಟ॥

## ಕಾಯ ಬಾರೊ ಸ್ವಾಮಿ

ಕಾಯ ಬಾರೊ ಸ್ವಾಮಿ ವೆಂಕಟೇಶಾ |
ಶರಣು ಬಂದೆವೋ... ತಿರುಮಲೇಶಾ|
||ವೆಂಕಟೇಶಾ... ತಿರುಮಲೇಶಾ...||

ಬಂದೆ ಬಹಳ ಬವಣೆಗಳಾ ಹೊತ್ತು |
ನೊಂದೆನಯ್ಯ ಕರ್ಮಬೀಜ ಬಿತ್ತೂ|
ತಂದೆ ಕಾಯ ಬೇಕೊ ಕರುಣೆ ಇತ್ತೂ|
ಇಂದಿರೇಶ ದರುಶನವೆಮಗಿತ್ತೂ ||
||ವೆಂಕಟೇಶಾ... ಶ್ರೀನಿವಾಸಾ...||

ನಿನ್ನ ನೆನೆಯೆ ಇಲ್ಲವು ಆಪತ್ತೂ|
ನಿನ್ನ ನಾಮವೇ ಸಿರಿ ಸಂಪತ್ತೂ |
ನನ್ನ ಕಾಯ್ವ ಭಾರ ನೀನೆ ಹೊತ್ತೂ |
ಪದುಮನಾಭ ಸಲಹೊ ಮುಕ್ತಿ ಇತ್ತೂ ||
||ವೆಂಕಟೇಶಾ..... ತಿರುಮಲೇಶಾ||

## ಬೆಳಕಾ ನೀಡುತಾ

ಬೆಳಕಾ... ನೀಡುತಾ....ಕತ್ತಲೆಯಾ ಓಡಿಸೋ....|
ಮನವಾ.. ಕಾಡುವಾ... ಚಿಂತೆಗಳಾ ಓಡಿಸೋ...||

ವಿಧಿ ಏನೋ... ಅರಿಯೆನೂ | ಭವಿತವದಾ ಕಾಣೆನೂ |
ಬವಣೆಗಳಾ ಬೇಗೆಗೇ....| ನಾ ಸೋತೂ ಹೋದೆನೂ |

ಗುಡುಗುಡು ಗುಟ್ಟುತ ಅಬ್ಬರಿಸುತಲಿಹ
ಆಶಪಾಶಗಳ ಓಡಿಸೋ....
ಕ್ಷಣ ಕ್ಷಣ ಕಣ ಕಣ ಬೆದರಿಸಿ ಕಾಡುವ
ಅತೃಪ್ತಿಯನು ತೊಲಗಿಸೋ...

ಅಂಧಕಾರವನು ಓಡಿಸೋ....
ಆನಂದ ಸಾಗರದಿ ಮೀಯಿಸೋ... ಮೀಯಿಸೋ.. ||ಬೆ|
ಏಕಿಂತೋ... ತಿಳಿಯೆನೂ| ಈ ಮೋಹಾ...ತೊರೆಯೆನೂ|
ಭ್ರಮೆಯಲ್ಲೇ ಮುಳುಗುತಾ| ದಾರಿಯನಾ ಕಾಣೆನೊ||

ಕರುಣಾಸಾಗರ ಈ ಭವಸಾಗರ ದಾಟಿಸೋ.... ದಾಟಿಸೋ|
ಕರ್ಮವ ಕಳೆಯುತ ಆತ್ಮ ಜ್ಯೋತಿಯ |
ಬೆಳಗಿಸೋ... ಬೆಳಗಿಸೋ....
ಜ್ಞಾನ ವೈರಾಗ್ಯವ ನೀಡುತ ಮುಕ್ತಿಯ |
ಕರುಣಿಸೋ... ಕರುಣಿಸೋ...|
ಶ್ರೀನಿವಾಸನೇ... ವೆಂಕಟೇಶನೇ... ಆಲಿಸೋ... ಪಾಲಿಸೋ...
ಪರಿಪಾಲಿಸೋ....||
||ಬೆಳಕಾ...ನೀಡುತಾ| ಕತ್ತಲೆಯೂ ಓಡಿಸೋ....||

## ತಂದೆ ನಿನ್ನ ನಾಮ

ತಂದೇ ನಿನ್ನ ನಾಮವೊಂದೇ| ಇಹ ಪರಕೆ ಸಾಧನ ವೆಂದೆ|
ಬಂಧು ಬಳಗ ನೀನೆ ಎಂದೇ | ನಿನ್ನ ಸನಿಹ ಓಡಿ ಬಂದೆ |

ಓಡಿ ಬಂದೆನೋ | ಓಡೋಡಿ ಬಂದೆನೋ|
ಶ್ರೀನಿವಾಸ ನಿನ್ನ ಚರಣ ನಂಬಿ ಬಂದೆನೊ ||

ಕರುಣಾಳು ನೀನೆ ಎಂದೆ| ಬೇಧವಿಲ್ಲದೆ ಪಾಲಿಪೊ ತಂದೆ|
ಪಾಪ ಪುಣ್ಯ ಎಲ್ಲ ನಿಂದೇ| ಎನುವವರೆ ನಿನ್ನವರೆಂದೆ |
ಓಡಿ ಬಂದೆನೋ ಓಡೋಡಿ ಬಂದೆನೋ|
ಶ್ರೀನಿವಾಸ ನಿನ್ನ ಚರಣ ನಂಬಿ ಬಂದೆನೋ ||ತಂ

ಕಾಮ ಕ್ರೋಧವೆಲ್ಲ ಅಳಿದು | ನಿನ್ನ ಪಾದ ಕಮಲವ ಪಿಡಿದು |
ಕರ್ಮಯೋಗವನ್ನು ತಿಳಿದು | ಮುಕ್ತಿಗಾಗಿ ಕರವನು ಮುಗಿದು |

ಓಡಿ ಬಂದೆನೋ ಓಡೋಡಿ ಬಂದೆನೊ|
ಶ್ರೀನಿವಾಸ ನಿನ್ನ ಚರಣ ನಂಬಿ ಬಂದೆನೋ| ||ತಂ

# ಬಾರೋ ಬಾರೋ ತಿಮ್ಮಪ್ಪ

ಬಾರೋ ಬಾರೋ ತಿಮ್ಮಪ್ಪಾ | ನಿನ್ನಯ ನಾಮವೆ ಜೇನುಪ್ಪ|
ಸವಿಯಲು ಬಾಳಾ ರುಚಿಯಪ್ಪಾ| ಅದಕು ಪುಣ್ಯಾ ಬೇಕಪ್ಪಾ ||ಬಾ||

ಕೆಟ್ಟಿರೊ ಮನಸಿಗೆ ನೆಮ್ಮದಿಯಾ| ಹುಟ್ಟಿದ ಜೀವಿಗೆ ಸದ್ಗತಿಯೂ|
ತಂದೆ ತಾಯ್ ಇಲ್ದಂತ ತಬ್ಬಲಿಯೂ| ಸುತ್ತಾಬಿಟ್ ಕಾಯ್ತಾನೆ ಹೆಬ್ಬುಲಿಯಾ||
||ಬಾರೊ||

ಮೂರ್ನಾಮ ಹಾಕಿಹ ಭಗವಂತ | ಮೂಢ ನೀನಾಗಲು ಬೇಡಂತ |
ಎಲ್ಲ ನನ್ ಪಾದಕ್ಕೆ ಸುರಿ ಅಂತ | ಕೈ ತೋರ್ಲಿ ಹೇಳ್ತಾನೆ ಧೀಮಂತ ||
||ಬಾರೊ||

ಬೆನ್ನಟ್ಟಿ ಬರ್‍ತಾನೆ ಭಗವಂತ | ತನ್ ಭಕ್ತಾನ ಕಾಯಲೇ ಬೇಕಂತಾ|
ಹರಿಸಲು ಬಾಳಿನ ದುರಂತಾ | ಬಂದಾನೆ ಭುವಿಗಿಳಿದು ಭಗವಂತ ||
||ಬಾರೊ||

ಬಾವಾಜಿ ಜೊತೆಯಲೀ ಪಗಡೆಯನಾಡಿ| ನಾಚಾರಮ್ಮನ ಒಡನಾಡಿ |
ಲಕ್ಷ್ಮಿ ಪದ್ಮಾವತಿ ಜೊತೆಯಲಿ ಕೂಡಿ| ವೆಂಕಟಗಿರಿಯಲಿ ನಿಂತಹ ನೋಡಿ ||
ಭಕ್ತಿಯಿಂದಲಿ ಭಜಿಸಿ ಕೊಂಡಾಡಿ ||
||ಕಾಯ್ತಾನೆ ಕೇಳಿರೋ ತಿಮ್ಮಪ್ಪ | ಅವನ ನಾಮವೆ ಜೇನುಪ್ಪ ||ಬಾರೊ||

ಬಿಟ್ಬಾರೆ ಕೆಟ್ಟಿರೋ ಅವ್ನಪಾದಾ||
ಮೂರ್ ಹೆಜ್ಜೇಲ್ ಅಳ್ದವಹಪಾದಾ|
ವೆಂಕಟ ರಮಣನ ಶ್ರೀಪಾದಾ...|
ನಂಬಿ ಕೆಟ್ಟೋರಿಲ್ಲ ಹರಿಪಾದಾ...||
||ಬಾರೋ ಬಾರೋ ತಿಮ್ಮಪ್ಪ | ನಿನ್ನಯ ನಾಮವೆ ಜೇನುಪ್ಪ |

## ತಪ್ಪಿದ್ದರೆನ್ನನ್ನು ಕ್ಷಮಿಸೊ

ತಪ್ಪಿದ್ದರೆನ್ನನ್ನು ಕ್ಷಮಿಸೊ । ಶ್ರೀನಿವಾಸನೆ ಭಕ್ತನಾಗಿರಿಸೋ।
ಜನ್ಮವೆತ್ತಿದ್ದಕ್ಕೆ ಕರ್ಮ ಅಳಿಸೋ । ನರ ಜನ್ಮದ ಮರ್ಮವ ತಿಳಿಸೋ ||
ಶ್ರೀನಿವಾಸನೆ... ವೆಂಕಟೇಶನೇ
ತಿರುಮಲೇಶನೇ... ಲಕ್ಷ್ಮೀರಮಣನೇ...||

ಕಾಮ ಕ್ರೋಧಾ ವೆಂಬೋ...ಕುಲುಮೆಯೊಳಗೇ
ಜಾರೀ ಬಿದ್ದೇನಯ್ಯಾ... ಜಾಲದೊಳಗೇ
ಜನನಾ ಮರಣಾ ವೆಂಬೋ ಗಾಣದೊಳಗೇ
ಸಿಲುಕಿ ಬೆಂದೆನಯ್ಯಾ ಭವದೊಳಗೇ||
ಶ್ರೀನಿವಾಸಾನೇ... ವೆಂಕಟೇಶನೇ
ತಿರುಮಲೇಶನೇ... ಲಕ್ಷ್ಮೀರಮಣನೇ ||

ಆಯುವು ಹೆಚ್ಚೆನ್ನಗಿಲ್ಲವೋ
ನೀನು ಒಲಿಯದಿದ್ದರೆ ಮುಕ್ತಿ ಇಲ್ಲವೋ
ತಂದೆತಾಯಿ ಬಂಧೂ ನೀನೆ ಎಲ್ಲವೂ
ವೆಂಕಟೇಶನೆ ಕೈಪಿಡಿದು ಸಲಹೂ ||
ಶ್ರೀನಿವಾಸಾನೇ.... ವೆಂಕಟೇಶನೇ
ತಿರುಮಲೇಶನೇ.... ಲಕ್ಷ್ಮೀರಮಣನೇ....||

## ಗೋವಿಂದ ಗೋಪಾಲ

ಗೋವಿಂದ ಗೋಪಾಲ । ಗೋಕುಲ ಬಾಲ ಶ್ರೀಲೋಲ ।
ಯದುನಂದ ದೇವಕಿಕಂದ । ಭಕ್ತಜನಾಪ್ರಿಯ ಭೂಪಾಲಾ ।
ಗೋವಿಂದ ಗೋಪಾಲಾ । ಭಕ್ತಜನಾಪ್ರಿಯ ಭೂಪಾಲಾ||ಪ||

ಗೋವಿಂದ ಗೋವಿಂದ । ಎನ್ನಲು ಭವದಾ ಈ ಬಂಧ ।
ಹರಿದೊಗೆದು ಓಡುವುದಯ್ಯ । ಜನುಮ ಜನುಮದಾ ಈ ಅಂಧ

ಗೋವಿಂದ.... ಗೋವಿಂದಾ |
ಹೃದಯದಿ ಮೊಳಗಲಿ ಆನಂದ ||ಗೋವಿಂದ||

ಗೋವಿಂದ ಗೋವಿಂದ | ನಾಮದ ಜಪದ ಅನುಬಂಧಾ |
ಸ್ಥಿರವಾಗಿ ಇರಲೆಂದು | ಬೇಡುತಲಿರುವೆನೂ ಗೋವಿಂದ |
ಗೋವಿಂದ.... ಗೋವಿಂದಾ |
ಹೃದಯದಿ ಮೊಳಗಲಿ ಆನಂದ ||ಗೋವಿಂದ||

## ರಂಗಾ ಶ್ರೀರಂಗಾ

ರಂಗಾ.... ಶ್ರೀರಂಗಾ... ಪಾಂಡುರಂಗಾ..||
ನಿನ್ನ ಕರುಣೆಯೆ ಪಾವನ ಗಂಗಾ.... ||ಪ||

ಗತಿ ನೀನು ಎನಗಾದೆ | ಹಿತ ನೀನು ಎನಗಾದೆ|
ಸಖ ನೀನೆ ಕಾಪಾಡೊ | ಪಾಂಡುರಂಗಾ....
ಅತಿ ಸಖನು ನೀ ಎನಗೆ ಪಾಂಡುರಂಗಾ... ||ರಂಗಾ||

ಯಾರನ್ನು ನಾ ಬೇಡೆ| ಏನನ್ನು ನಾ ಕೇಳೆ |
ನೀನಿಲ್ಲ ದಾರಿಲ್ಲ ಪಾಂಡುರಂಗಾ ...|
ದಾರಿ ತೋರೋ ನೀನೆ ಪಾಂಡುರಂಗಾ ||ರಂಗಾ||

ಗುರುದೈವ ನೀ ಎನಗೆ | ಮನೆದೈವನೀ ಎನಗೆ |
ಜಗದೊಡೆಯ ಕಾಪಾಡೊ ಪಾಂಡುರಂಗಾ |
ಕಾರುಣ್ಯ ಮೂರುತಿಯೆ ಪಾಂಡುರಂಗಾ ||ರಂಗಾ||

ಅಂತರಂಗದಿ ನಿನ್ನ | ಸಂತಸದಿ ಬೇಡುವೆನು |
ಸಂತನನು ಮಾಡಯ್ಯ ಪಾಂಡುರಂಗಾ |
ನಿನ್ನ ಪಾದ ಧೂಳಿಯು ಮಾಡೋ ಪಾಂಡುರಂಗಾ ||ರಂಗಾ||

ಪಂಡರೀಪುರನಾಥ | ಪತಿತ ಪಾವನ ಖ್ಯಾತ |
ಅತಿಶಯನು ನೀನಯ್ಯ ಪಾಂಡುರಂಗಾ |
ಮತಿ ಭ್ರಾಂತರನು ಕಾಯೊ ಪಾಂಡುರಂಗಾ ||ರಂಗಾ||
||ಗತಿ ನೀನು ಎನಗಾದೆ ||

# ಶ್ರೀ ಕೃಷ್ಣಾರ್ಪಣ

ಶ್ರೀ ಕೃಷ್ಣಾರ್ಪಣ ಎನ್ನುವ ಮಂತ್ರವ
ಬಿಡದೇ ಜಪಿಸೋ ಮಾನವಾ।
ಬಿಡದೇ ಜಪಿಸೋ ಉಸಿರಲಿ ಬೆರಸೋ।
ಹರಿಯ ಸಮರ್ಪಣ ಮಂತ್ರವ ||ಪ||

ಪಾಪ ಪುಣ್ಯಗಳಿಂದ ಪಾರುಮಾಡುವ ಮಂತ್ರ ।
ದುರಿತ ದುಃಖಗಳೆಲ್ಲ ಹಾರಿಹೋಗುವ ತಂತ್ರ ।
ಶ್ರೀಹರಿ ನಾಮವೆ ದಿಗ್ಬಂಧನ ಯಂತ್ರ।
ಕರ್ಮ ಬಂಧನದಿಂದ । ಮುಕ್ತಿ ನೀಡುವ ಮಂತ್ರ ||ಶ್ರೀ||

ಏಕ ಚಿತ್ತವ ನೀಡೊ ಏಕೈಕ ಮಂತ್ರ ।
ಏಳು ಬೀಳುಗಳಿಂದ ಏಳಿಸೊ ಯಂತ್ರ ।
ಬ್ರಹ್ಮ ವಿದ್ಯೆಯ ತಿಳಿಸೊ ಗುರು ಬೋಧೆಯಾ ತಂತ್ರ ।
ಶ್ರೀವೈಕುಂಠಕೆ ಕರೆದೊಯ್ಯೊ ಮಹಮಂತ್ರ ||ಶ್ರೀ||

ಶ್ರಮ ಪಡಬೇಕಿಲ್ಲ ಹಣದಾಹವಿಲ್ಲ ।
ನೆರೆಹೊರೆ ಹಂಗಿಲ್ಲ ಪರಬಾಧೆ ಇಲ್ಲ ।
ಕಾಲವ ಮುಡಿಪಿಟ್ಟು ಕಾಯಬೇಕಿಲ್ಲ ।
ಬಹುಕೃತ ವೇಷದಿ ಪಡೆಯಬೇಕಿಲ್ಲ ||ಶ್ರೀ||

ಕೊಟ್ಟಿಹ ಪಾತ್ರಕೆ ಇಟ್ಟಿಹ ಸೂತ್ರವ । ಗಟ್ಟಿಯಾಗಿರಿಸಿಕೊ ತನುಮನವಾ।
ಆಗಲೆ ಆಗುವೆ ಅವನವ || ತಿಳಿಯುವೆ ಗೀತೆಯ ಮರ್ಮವ ||

ಕುಡಿಯುವ ನೀರು ಆಡುವ ಮಾತು। ಸೇವಿಸೊ ಗಾಳಿ ಅವನಾಗೀ ।
ಸೇರುವ ನಿನ್ನಲಿ ಬೆರಸುವ ತನ್ನಲಿ । ನೀನಾನೆಂದು ಒಂದಾಗೀ.... ||ಶ್ರೀಕೃ

# ಪಾವನವಾಗಲಿ

ಪಾವನವಾಗಲಿ ನಿನ ಜನುಮ |
ಶ್ರೀಹರಿಗೆ ಸಮರ್ಪಿಸಿ ತನುಮನಾ ||ಪ||

ಬಾಳಲು ಬಂದೆವು ಮೂರುದಿನಾ |
ಭವ ಬಂಧನ ಕಾಡಿತೊ ದಿನ ದಿನಾ |
ದೇವನ ಒಲಿಸಲು ಭಕ್ತಿ ಮನಾ |
ಒಂದಿದ್ದರೆ ಸಾಕೊ ಅನುದಿನಾ ||ಪಾವನ||

ಬಾಲ್ಯದೆ ಕಳೆಯಿತು ಒಂದು ದಿನಾ |
ಯೌವ್ವನದಲ್ಲೆ ಮತ್ತೊಂದು ದಿನಾ |
ಮುಪ್ಪಿನ ಕಾಲವೆ ಉಳಿದ ದಿನಾ |
ಬಲು ದುರ್ಭರವೋ ಈ | ಕಡೆಯದಿನ |
ಆದ್ದರಿಂದ....
ಪಾಂಡುರಂಗನ ಭಜಿಸಿ| ಒಲಿಸಿ|
ಪಡೆಯೋ ಶಾಂತೀ ಸುಖವನಾ ||ಪಾವನ||

# ಜಯ ಜಯ ಲಕ್ಷ್ಮೀನರಸಿಂಹ

ಜಯ ಜಯ ಲಕ್ಷ್ಮೀನರಸಿಂಹ |
ಅಭಯವ ನೀಡೊ ಪರಂಧಾಮ |
ನಿನ್ನಯ ಪಾದಕೆ ಶರಣೆಂದು |
ಅಡಿಗಡಿಗೆರಗುವೆ ಕಾಯೆಂದು ||ಜಯ||

ಭಕ್ತಪ್ರಹ್ಲಾದಗೆ ನೀನೊಲಿದೆ |
ಕಂಬವಸೀಳುತ ನೀಬಂದೆ|
ಹಿರಣ್ಯಕಶಿಪುವ ಎದೆಬಗಿದೆ
ಕಂದಗೆ ಅಭಯವ ನೀಡಿದೆ ||ಜಯ||

ನಿನ್ನಯ ಭಜನೆಯ ಮಾಡುವಗ ।
ದುರಿತ ದುಃಖಗಳಾ ನೀಗುವೆ ।
ಭಕ್ತಿಯಿಂದಲಿ ನಿನ್ನ ಸೇವಿಪಗೇ ।
ಭವ ಮುಕ್ತಿಯ ನೀಡುತ ಕಾಯುವೆ ।।ಜಯ

ಕವರಿ ಕ್ಷೇತ್ರದಿ ನೀ ನೆಲಸಿ ಕಡು ಕಷ್ಟಗಳೆಲ್ಲವ ಕಳೆಯುವೆ।
ಆಹೊ ಬಲ ಕ್ಷೇತ್ರದಿ ನೀನೆಲಸಿ ಅರಿಬಾಧೆಯನು ನೀಗುವೆ ।
ಘಾಟೀ ಕ್ಷೇತ್ರದಿ ನೀನೆಲಸಿ । ಗಂಡಾಂತರಗಳ ಹರಿಸುವೆ ।
ಕುಕ್ಕೇ ಕ್ಷೇತ್ರದಿ ನೀನೆಲಸಿ ಕುಜನಗೆ ಶಿಕ್ಷೆಯ ಮಾಡುವೆ।
ನಮ್ಮಯ ಹೃದಯದಿ ನೀನೆಲಸಿ  ಮುಕ್ತಿಯ ನಮಗೇ ನೀಡುವೆ ।।

ಪಾಹಿ ಪಾಹಿ ನರಸಿಂಹ । ದೇಹಿ ದೇಹಿ ನರಸಿಂಹ
ಜಯ ಜಯ ಲಕ್ಷ್ಮೀನರಸಿಂಹ
ಅಭಯವ ನೀಡೊ ಪರಂಧಾಮ।।

## ಸಾಗಲಿ ಮುಂದೆ ಜೀವನ

ಸಾಗಲಿ ಮುಂದೇ ಜೀವನ । ಆಗಲಿ ಜನುಮಾ ಪಾವನ ।
ನೀಡುತ ದೇವಗೆ ತನುಮನಾ ।
ಕಳೆಯಲಿ ಕರ್ಮದ ಬಂಧನ ।
ಕರ್ಮಯೋಗದ ಸಾಧನಾ ।।ಪ।।

ಬೋಧಿಸೆ ಕೃಷ್ಣನು ಗೀತೆಯನು ।
ತಾ ಹರಿಸಲು ಮೋಹದ ಬಂಧವನು ।
ಅರ್ಪಿಸಿ ನನ್ನಲಿ ಕರ್ಮವನು ।
ನಿಜ ಮುಕ್ತ ನೀನಾಗು ಎಂದಿಹನು ।।ಸಾಗಲಿ।।

ಸ್ಥಿತ ಪ್ರಜ್ಞತೆಗೇ ಯೋಗವನು।
ಮಾಡೆನ್ನುತ ಹಳಿದಿಹ ಕಾಮವನು ।
ತಿಳಿಸಿದ ಮೋಕ್ಷದ ಮಾರ್ಗವನು ।
ಕೃಷ್ಣಾರ್ಪಣ ಎನ್ನುವ ಮಂತ್ರವನು ।।ಸಾಗಲಿ।।



# ಶ್ರೀರಾಮ ನಾಮ ತಾರಕ

ಶ್ರೀರಾಮ ನಾಮ ತಾರಕವೆ ದಿವ್ಯಮಂತ್ರವು।
ದಿವ್ಯ ಮಂತ್ರವೂ... ವೇದ ಘೋಷವೂ।
ಭಜಿಸಿ ಎಲ್ಲರೂ । ಸುಖಿಸಿ ಎಲ್ಲರೂ ||ಶ್ರೀರಾಮ||

ಪಾಪಿಯನ್ನು ಪರಮನಾಗಿ ಮಾಡ್ವ ಮಂತ್ರವೂ ।
ಸಾಧು ಸಂತ ಸಜ್ಜನರ ಹೃದಯ ಗೀತವೂ ||ಶ್ರೀರಾಮ||

ಜಾತಿಮತದ ಬೇಧವಿಲ್ಲದ ನಾಮರೂಪವೂ ।
ಮುಕ್ತಿಮಾರ್ಗ ತೋರುವಂತ ಸರಳ ಸೂತ್ರವೂ ||ಶ್ರೀರಾಮ||

ರಾಮನೆಂಬೆರಡಕ್ಷರವೆ ಬ್ರಹ್ಮಸೂತ್ರವೂ ।
ನಾರದಾದಿ ಮುನಿಗಳಿಗೂ ಪರಮ ಪೂಜ್ಯವೂ ||ಶ್ರೀರಾಮ||

ಕಾಮಧೇನು ಕಲ್ಪವೃಕ್ಷದಂತ ನಾಮವೂ ।
ಭವಸಾಗರ ದಾಟಿಸುವ ಸುಲಭ ನೌಕವೂ ||ಶ್ರೀರಾಮ||

# ಕೊಂಡಾಡಿ ಹಾಡಿ

ಕೊಂಡಾಡಿ ಹಾಡಿ ಪಾಡಿ ಶ್ರೀರಾಮ ನಾಮವಾ
ಹೃದಯ ತುಂಬ ತುಂಬಿ ಅವನ ದಿವ್ಯ ರೂಪವಾ ||

ರಾಮ ಜೈಜೈರಾಮ್ । ಶ್ರೀರಾಮ ಜೈಜೈರಾಮ್ ।
ರಾಮ ಜೈಜೈ ರಾಮ್ । ಶ್ರೀರಾಮ ಜೈಜೈರಾಮ್||

ಎಲ್ಲರನ್ನು ಪ್ರೀತಿಯಿಂದ ಕಾಣುವ ಅವನು |
ನಿಸ್ವಾರ್ಥಿಯಾದ ಅವನು ಎಂಥಾ ಸುಗುಣನು |
ನಂಬಿದವರ ಕೈಬಿಡದ ಕಾರುಣ್ಯನೂ ..|
ಸಂತರ ಹೃದಯಾಂತರದಿ ನಿಂತ ಮಹಿಮನೂ ||
ರಾಮ ಜೈಜೈರಾಮ್ | ಶ್ರೀ... ರಾಮ ಜೈಜೈರಾಮ್ ||

ಗುರು ಮಾತಾ ಪಿತಾ ಸುಜನ ಕಾರ್ಯಬಂಧುವೂ |
ಸತ್ಯ ಧರ್ಮ ನ್ಯಾಯ ಶೀಲ ಜ್ಞಾನ ಸಿಂಧುವೂ |
ಕಾಮಿತಾರ್ಥಗಳ ನೀಡೋ ಕಾಮಧೇನುವೂ |
ರಾಜಾ.. ರಾಮ | ಸೀತಾ.. ರಾಮ| ನಮ್ಮ ಪ್ರಾಣವೂ...
ರಾಜಾ ರಾಮ | ಸೀತಾರಾಮ ನಮ್ಮ ಹೃದಯವೂ|
ಬಾಳಿಗಾದರ್ಶವೂ...||

ರಾಮ ಜೈಜೈರಾಮ್ | ಶ್ರೀರಾಮ ಜೈಜೈರಾಮ್ |
ರಾಮ ಜೈಜೈರಾಮ್ | ಶ್ರೀರಾಮ ಜೈಜೈರಾಮ್ ||

## ರಾಮ ರಾಮ ರಾಮ

ರಾಮ ರಾಮ ರಾಮ ರಾಮ | ರಾಮ ಭಜನ |
ಎಲ್ಲೆಲ್ಲು ನಡೆಯಬೇಕು ರಾಮ ಕೀರ್ತನ |
ರಾಮನೆಂಬ ದಿವ್ಯ ನಾಮ ಮುಕ್ತಿ ಸೋಪಾನ |
ರಾಮ ಭಜನೆ ನಡೆಯುವಂತ ಸ್ಥಳವೆ ನಂದನಾ ||
ರಾಮ್ ... ಶ್ರೀರಾಂ....| ರಾಮ್.... ಶ್ರೀರಾಂ... ||ಪ|

ರಾಮ ನಾಮ ಕೇಳಿ ಹನುಮ ಓಡಿ ಬರುವ |
ಚಪ್ಪಾಳೆ ತಟ್ಟಿ ತಟ್ಟಿ ಹನುಮ ಕುಣಿಯುವ |
ಕಂಗಳಲ್ಲಿ ಸುರಿಸುತ ಆನಂದ ಭಾಷ್ಪವಾ |
ರಾಮ ರಾಮ ಎನುತ ಮಹಾನಂದ ಪಡೆಯುವ |
ರಾಮ್... ಶ್ರೀರಾಂ... | ರಾಮ್ .... ಶ್ರೀರಾಂ ||ರಾ

ಚಿರಂಜೀವಿಯಾದ ರಾಮನ ನಾಮ ಸವಿಯಲು |
ಹನುಮ ಬ್ರಹ್ಮಚಾರಿಯಾದ ರಾಮನ ಪ್ರೇಮ ಪಡೆಯಲು |

ಬಲಶಾಲಿಯಾದ ರಾಮನ ಸೇವೆ ಗೈಯ್ಯಲು ।
ಹನುಮ। ವಜ್ರಕಾಯನಾದ ರಾಮನ ಭಕ್ತರ ಕಾಯಲು ॥
ರಾಮ್... ಶ್ರೀರಾಂ....। ರಾಮ್..... ಶ್ರೀರಾಮ್ ॥ರಾ
ತೂಕಡಿಸುವವರ ಕಿವಿಯ ಹಿಂಡಿ ಎಳೆಯುವ ಹನುಮ ॥
ಹರಟೆ ಹೊಡೆಯುವವರ ತಲೆಯ ಮೇಲೆ ಕುಟ್ಟುವ ।
ರಾಮ ನಿಂದಕರ ಬಾಲದಲ್ಲಿ ಬಡಿಯುವಾ ।
ರಾಮ ರಾಮ ಎನ್ನುವರ ವಂಶ ಕಾಯುವ ॥
ರಾಮ್... ಶ್ರೀರಾಂ । ರಾಮ್... ಶ್ರೀರಾಂ ॥



## ಭಲೆ ಭಲೆ ವೀರ

ಭಲೆ ಭಲೆ ವೀರ ಹನುಮಂತ ।
ನಮ್ಮ ಭಜನೆಗೆ ಬಾರೊ ಭಗವಂತ ॥ಪ॥
ರಾಂ ರಾಂ ಎನ್ನುತ ಕುಣಿಯುವೆವು ।
ಶ್ರೀರಾಮ ತಾರಕವ ಭಜಿಸುವೆವು ।
ಶ್ರೀರಾಮ ಜಯರಾಮ ಜಯಜಯ ರಾಮ ।
ಶ್ರೀರಾಮ ಜಯರಾಮ ಜಯಜಯ ರಾಮ ॥ಅ.ಪ॥

ರಘುರಾಮನ ಪ್ರೀತಿಯ ಮಕರಂದ ।
ಹೀರಿದ ಪಾತ್ರನೆ ಕೇಸರಿ ನಂದ।
ಮಕ್ಕಳು ಕೂಡ ನಿನ್ನಿಂದ । ರಾಮ ರಾಮ ಎನ್ನುವುದು ಬಲುಚೆಂ
ರಾಮ ರಾಮ ರಾಮಸೀತ । ರಾಮ ರಾಮ ರಾಮ್ ।
ರಾಮ ರಾಮ ರಾಮಸೀತ । ರಾಮ ರಾಮ ರಾಮ್ ॥
॥ಭಲೆ ಭಲೆ ವೀರ॥

ಲಂಕೆಗೆ ಹಾರಿದ ಮಹಕಾಯ|
ಶ್ರೀರಾಮಾಯಣದ ಮಹನೀಯ |
ರಾಮ ಭಂಟನೇ ಜಯಾ ಜಯಾ |
ವಿಶ್ವ ವಂದಿತನೆ ಜಯಾ ಜಯಾ ||
||ಭಲೆ ಭಲೆ ವೀರ||

## ಎಂಥಾ ಬಲವಂತನಯ್ಯ

ಎಂಥಾ ಬಲವಂತನಯ್ಯ| ನಮ್ಮಾಂಜನೇಯ |
ಎಂಥಾ ಬಲವಂತನಯ್ಯ |
ಎಂಥಾ ಬಲವಂತ| ಭಗವಂತ ಮಾರುತಿರಾಯ |
ವೀರ ರಣಧೀರ | ಬಲುಶೂರ | ಅಂಜನಿಕುವರ ||
ಎಂಥಾ ಬಲವಂತನಯ್ಯ ||ಪ||

ಲಂಕೇಗೆ ಜಿಗಿಯುತ | ಲಂಕಾಧಿಪನ ಸೊಕ್ಕ |
ಶಂಕೇ ಇಲ್ಲದೆ ಮುರಿದು | ಲಂಕಾ ದಹನ ಗೈದ ||ಎಂಥಾ||

ವಾನರ ಸೇನೆಯುಟ್ಟಿ | ಸೇತುವೆಯನು ಕಟ್ಟಿ |
ಛಲದಿ ಸೆಣಸಿದ ಕಲಿ | ವೀರ ಭಜರಂಗ ಬಲಿ ||ಎಂಥಾ||

ಕಾಲನೇಮಿಯ ಕೊಂದು | ಸಂಜೀವಿನಿಯ ತಂದು |
ರಾಮ ಅನುಜನ ಪ್ರಾಣ | ಮರಳೀ ತಂದಥ ಜಾಣ ||ಎಂಥಾ||

## ವಸಂತಪುರದೊಳು

ವಸಂತ ಪುರದೊಳು ಪ್ರಸನ್ನನಾಗಿಹ ಮಾರುತಿ ಭಜನೆಯ ಮಾಡೋಣ|
ಮಾರುತಿ ಭಜನೆಯ ಮಾಡೋಣ | ಅವನ ಚರಿತೆಯನು ಹಾಡೋಣ|
ಎಲ್ಲರು ಒಂದೆಡೆ ಸೇರುತ ಭಕ್ತಿಲಿ ಜಯ ಜಯ ಘೋಷವ ಮಾಡೋಣ ||
||ಜೈ ಭಜರಂಗ ಜೈವಜ್ರಾಂಗ| ಭಗವಾನ್ ಮಾರುತಿ ಜೈ ಜೈಜೈ ||ಪ||

ದ್ವೇಷಾಸೂಯೆಯ ಮರೆಯೋಣ । ಪ್ರೇಮನ ಮರೆತು ಹಾಡೋಣ ।
ಮಾರುತಿ ಎನ್ನಲಿ ಕರುಣೆಯ ತೋರೋ। ಎನ್ನುತ ಕರವ ಮುಗಿಯೋಣ
॥ಜೈ ಭಜರಂಗ । ಜೈ ವಜ್ರಾಂಗ । ಭಗವಾನ್ ಮಾರುತಿ ಜೈ ಜೈ ಜೈ॥

ಅಂಜನಿಸುತನೆ । ವಾಯುಪುತ್ರನೆ । ಆರ್ತರ ಸಲಹು ಎನ್ನೋಣ ।
ಈ ಭವದೊಳು ಬಹು। ಬಳಲುತ ನೊಂದಿಹೆ। ನೀನೆ ಗತಿ ಎಂದು ಕೂಗೋಣ
॥ಜೈಭಜರಂಗ । ಜೈವಜ್ರಾಂಗ । ಭಗವಾನ್ ಮಾರುತಿ ಜೈ ಜೈ ಜೈ॥

ವಾನರ ವೀರನೆ । ವಜ್ರಕಾಯನೆ । ವರವನು ಕರುಣಿಸು ಎನ್ನೋಣ ।
ನಿನ್ನಯ ಮಂಗಳ ಮೂರುತಿ ಎನ್ನಯ ಹೃದಯದಿ ನೆಲಸಲಿ ಎನ್ನೋಣ
॥ಜೈ ಭಜರಂಗ ಜೈವಜ್ರಾಂಗ । ಭಗವಾನ್ ಮಾರುತಿ ಜೈ ಜೈ ಜೈ॥

ರಾಮಭಕ್ತನೆ । ಲಕ್ಷ್ಮಣ ಪ್ರಾಣನೆ । ನಿನ್ನನೆ ನಂಬಿಹೆ ಎನ್ನೋಣ ।
ನಿನ್ನಯ ದರುಶನ ನೀಡದೆ ಹೋದರೆ । ಮರಣವೆ ಲೇಸು ಎನ್ನೋಣ ।
॥ ಜೈಭಜರಂಗ ಜೈ ವಜ್ರಾಂಗ। ಭಗವಾನ್ ಮಾರುತಿ ಜೈ ಜೈ ಜೈ ॥

ಆತ್ಮರಾಮನ ಭಜಿಸೋಣ । ಆತ್ಮಕೆ ಶಾಂತಿಯ ಹೊಂದೋಣ
ಮಾರುತಿ ಭಜನೆಯ ಹಾಡುತ ಕುಣಿಯುತ । ಅವನಲೆ ಐಕ್ಯವಾಗೋಣ
ಜೈ ಭಜರಂಗ ಜೈ ವಜ್ರಾಂಗ ಭಗವಾನ್ ಮಾರುತಿ ಜೈ ಜೈ ಜೈ ॥

## ಸಂಜೀವಿನಿ ಗಿರಿ

ಸಂಜೀವಿನಿ ಗಿರಿ ಹೊತ್ತು ತಂದ ಸಂಜೀವ ಇವನು ।
ಸರ್ವಶಾಸ್ತ್ರ ಸಕಲಾಗಮ ಪಂಡಿತ ಸಮೀರ ಇವನು ।
ಹಾರುತ ಲಂಕೆಗೆ ಸೀತೆಯ ಹುಡುಕಿದ ಹನುಮ ಇವನು ।
ಮಾತೃವಾಕ್ಯ ಪರಿಪಾಲಕನಾದ ಮಾರುತಿ ಇವನು ॥ಸಂ॥

ಆತ್ಮರಾಮನ ಹೃದಯದಿ ತೋರಿದ । ಆಂಜನೇಯ ಇವನು ।
ಪರಂಧಾಮ ಫಲ್ಗುಣ ಧ್ವಜ ಶೋಭಿತ । ಪವನ ಕುವರ ಇವನು।
ಬ್ರಹ್ಮಜ್ಞಾನಿ ಭವರೋಗ ನಿವಾರಕ । ಬ್ರಹ್ಮಚಾರಿ ಇವನು।
ಭಕ್ತಪೋಷ ಬಲಭೀಮಕಾಯ। ಭಜರಂಗ ಬಲಿ ಇವನು॥ ॥ಸಂ॥

# ಓ ಆಂಜನೇಯ

ಓ ಆಂಜನೇಯ । ನೀ ಎನ್ನ ಹೃದಯ
ನೀಡೆಮಗೆ ಜ್ಞಾನೋದಯಾ ॥
ಬಹುಕಾಲದಿಂದ ಬಳಲಿದೆನೊ ಸ್ವಾಮಿ ।
ನಿನ್ನ ದರುಶನವ ಕಾಣದೇ .... ॥ಓ ಆಂಜನೇಯ

ಸಂಸಾರದಲ್ಲಿ ಮುಳುಗಿರುವೆನೆಂದು । ನೀ ದೂರ ತಳ್ಳದಿರೋ...।
ನೀ ಕೈಯ್ಯಹಿಡಲು ಉದ್ಧರಿಪರಾರೊ । ಓ ಅಂಜನೀಕುವರನೇ....
॥ಓ ಆಂಜನೇಯ

ಇನ್ನೇಕೆ ಪ್ರಭುವೆ ಎನಗೀಪರೀಕ್ಷೆ। ನೀ ಮುನಿಯೆ ನಾ ಉಳಿವೆನೇ ।
ನಿನ್ನಂಥ ದೈವ ನಾಪಡೆದ ಮೇಲೆ । ಅನ್ಯರಡೆ ನಾ ಬೇಡ್ವನೇ...
॥ಓ ಆಂಜನೇಯ

ಸರ್ವ ಶಕ್ತನು ನೀನೇ ಆದರು । ರಾಮರಿಗೇ ನೀ ಭಂಟನೊ॥
ಸರ್ವ ಶಾಸ್ತ್ರಪರಿಣಿತ ನೀನಾದರು । ರಾಮರ ಚರಣದಿ ಸೇವಕನೊ॥
ವಜ್ರಕಾಯ ಭಜರಂಗ ನೀನಾದರು । ಮಾತೃವಾಕ್ಯ ಪರಿಪಾಲಕನೊ॥
ವೀರ್ಯ ಶೌರ್ಯ ತೇಜೋ ಬಲನಾದರೂ । ಬ್ರಹ್ಮಚಾರಿ ಸಂಭಾವಿತನೊ ॥
॥ಓ ಆಂಜನೇಯ ನೀ ಎನ್ನ ಹೃದಯ॥

# ಹನುಮ ಹನುಮ

ಹನುಮ ಹನುಮ ಹನುಮಣ್ಣ ।
ರಾಮನ ಭಜನೆಗೆ ಬಾರಣ್ಣ ।
ಬಾಳೆಯ ಹಣ್ಣನು ತಿನ್ನಣ್ಣ ।
ಶ್ರೀರಾಮನ ನಮಗೆ ತೋರಣ್ಣ ॥ಹನುಮ॥
ಜೈ ಜೈ ಹನುಮ ಜಯ ಹನುಮ
ಜೈ ಭಜರಂಗ ಬಲ ಭೀಮ ॥

ಎಷ್ಟೋ ಜನುಮವ ಕಳೆದಿರುವೆ ।
ರಾಮನ ಕಾಣದೆ ನೊಂದಿರುವೆ ।
ಗತಿ ನೀನೆನ್ನುತ ಬಂದಿರುವೆ ।
ನಿನ್ನಯ ಪಾದವ ನಂಬಿರುವೆ ॥
ಜೈ ಜೈ ಹನುಮಾ ಜಯ ಹನುಮ ।
ಜೈ ಭಜರಂಗ ಬಲಭೀಮ ॥ಹನುಮ॥

ಸೂರ್ಯನ ಹಿಡಿಯಲು ಎಗರಿದ ಧೀರ ।
ಸಮುದ್ರ ಲಂಘನ ಮಾಡಿದ ಶೂರ !
ಸೀತೆಯ ಕುರುಹನು ತೋರಿದ ವೀರ ।
ರಾಮ ಭಂಟ ವೀರ-ಧೀರ-ಶೂರ ಜೈ ॥
ಜೈ ಜೈ ಹನುಮ ಜಯ ಹನುಮ ।
ಜೈ ಭಜರಂಗ ಬಲಭೀಮ ॥ಹನುಮ॥

ನೀನಿದ್ದೆಡೆ ರಾಮನು ಬರುವ ।
ನಿನ್ನ ಭಜಿಸಲು । ಶನಿ ಕಾಡದೆ ಬಿಡುವ ।
ಭಕ್ತರ ಹರಸುತ ತಲೆಕಾವಾ ।
ತೋರಯ್ಯ ಶ್ರೀರಾಮರ ಪಾದವಾ ॥
ಜೈ ಜೈ ಹನುಮಾ ಜಯ ಹನುಮ ।
ಜೈ ಭಜರಂಗ ಬಲಭೀಮ ॥ಹನುಮ॥





# ಗುರುಪಾದ ಸೇವೆ ಮಾಡಿ

ಗುರು ಪಾದ ಸೇವೆ ಮಾಡಿ। ಗುರು ಒಲುಮೆಯೊಂದ ಬೇಡಿ।
ಗುರು ಪಾದ ಸೇವೆ ಮಾಡಿ ||ಪ||

ಗುರು ಹೊರತು ಜಗವು ಇಲ್ಲ । ಗುರು ನೆನೆಯೆ ಭಯವು ಇಲ್ಲ ।
ಗುರು ಚರಣ ನಂಬಿರೆಲ್ಲ । ಮತ್ತೆ ಜನನ ಮರಣವಿಲ್ಲ ।
ಜಗ ಜ್ಜೀವ ಗುರುವು ತಾನೆ। ||ಪ||

ಮನದಲ್ಲೆ ಗುರುವು ಇರುವ । ನೆನೆದಲ್ಲೆ ಗುರುವು ಬರುವ ।
ಭಕ್ತಿಗಾಗಿ ತಾನು ಒಲಿವ । ಭಕ್ತರಲ್ಲೆ ತಾನು ಇರುವ ।
ಆತ್ಮನಾಗಿ ಬೆಳಗುತಿರುವ । ||ಗುರು||

ಗುರು ಸೇವಾ । ಸಾಧನ ಮಾರ್ಗ ।
ಗುರು ಕರುಣಾ । ಪರಿಪೂರ್ಣ ||
ಅಂತರಂಗ ಶುದ್ಧಿಯಿಂದ । ಸೇವೆ ಮಾಡಿ ಧನ್ಯರಾಗಿ || ||ಗುರು||

ಗುರು ಬ್ರಹ್ಮ ಗುರುವಿಷ್ಣು । ಗುರು ದೇವ ಮಹೇಶ್ವರ ।
ಗುರು ಸಾಕ್ಷಾತ್ ಪರಬ್ರಹ್ಮ । ತಸ್ಮೈ ಶ್ರೀಗುರವೆ ನಮಃ|| ||ಗುರು||

||ಗುರುಪಾದ ಸೇವೆ ಮಾಡಿ||

# ಚಿತ್ತ ಹಾರಿಸೊ

ಚಿತ್ತ ಹಾರಿಸೊ ನಿನ್ನತ್ತ । ಎನ್ನಯ್ಯ ದತ್ತ ಚಿತ್ತ ಹಾರಿಸೊ ನಿನ್ನತ್ತ ।
ಛಿತ್ತೀಲಿ ಮೂಡಿದಂತ । ಮುತ್ತಿನ ಮೂರುತಿ
ಅತ್ತಿತ್ತ ಜಾರದ್ಹಾಂಗ । ದತ್ತಾನೆ ಸಲಹಯ್ಯ ||ಚಿತ್ತ ||

ಕಾಮಕ್ರೋಧಗಳೆಲ್ಲ ಕಮರಿ ಹೋಗುವ ಹಾಗೆ
ಮೋಹ ಪಾಶಗಳೆಲ್ಲ ಮರಳಿ ಬಾರದ ಹಾಗೆ ||ಚಿತ್ತ ||

ಪಂಚ ಭೂತಗಳೆಲ್ಲ ವಂಚಿಸಿ ನಗುತಿದೆ
ಸಂಚಿಗೆ ಸಿಲುಕದ್ಹಾಂಗೆ ದತ್ತಾನೇ ಸಲಹಯ್ಯ ||ಚಿತ್ತ ||

ಮರಣ ಶೋಕವ ಕಳೆಯೊ ಮತ್ತೆ ಜನಿಸದ ಹಾಗೆ
ಜ್ಞಾನ ಜ್ಯೋತಿಯು ಬೆಳಗೊ। ಕರ್ಮ ಸುಡುವ ಹಾಗೆ ||ಚಿತ್ತ ||

# ಕಾಮ ಕ್ರೋಧ ಲೋಭ

ಕಾಮ ಕ್ರೋಧ ಲೋಭ ಮೋಹ ಹರಿಸೊ ಗುರುರಾಯ।
ನೇಮದಿಂದ ನಡೆಯುವಂತೆ ಹರಸೋ ಮಹನೀಯಾ||
ಗುರುರಾಯಾ ಗುರುರಾಯ ಶ್ರೀಗುರುಶಂಕರ ಯತಿರಾಯ|| ||ಪ||

ಏತಕೆ ಬಂದೆನೊ ಜನ್ಮವ ತಳೆದು ಅರಿಯೆನು ನಾನಿಂದೂ।
ತಿಳಿಸಲು ಬೇಕೈ ಜ್ಞಾನ ಸ್ವರೂಪನೇ ಬಾಳಿಗೆ ಕೊನೆ ಎಂದು।
ಗುರುರಾಯಾ ಗುರುರಾಯಾ ಶ್ರೀಗುರುಶಂಕರ ಮಹನೀಯ|| ||ಕಾಮ||

ಅಸ್ಥಿರ ದೇಹವು ಬೀಳುತಲಿದ್ದರು ಮೋಹವು ಬಿಡದಿಂದು
ಆಸರೆ ನೀಡದೆ ಹೋದರೆ ಗುರುವೆ ಕಾಯುವರಾರಿಂದು
ಗುರುರಾಯಾ ಗುರುರಾಯ ಶ್ರೀಗುರುಶಂಕರ ಯತಿರಾಯ || ||ಕಾಮ||

ಚಿತ್ತವ ಕಲುಕುತ ನುಂಗಿದೆ ಶಾಂತಿಯ ಬಾಳಿನ ಭ್ರಮೆಯೊಂದು
ಈಜಲು ಬಾರದೆ ಧುಮುಕಿದೆ ಕಡಲೊಳು ಕಾಯಲು ಬೇಕಿಂದು
ಸಮರ್ಥನೆ ಸೇವಕ ನಾನಿಂದು।
ಗುರುರಾಯಾ ಗುರುರಾಯ ಶ್ರೀಗುರುಶಂಕರ ಯತಿರಾಯ || ||ಕಾಮ||

ಪಾದಕೆ ಬಿದ್ದೆನೊ ಪಾಮರ ನಾನು ಉದ್ಧರಿಸೋ ಗುರುವೇ
ಸೇವಕನಾಗಿ ಸ್ವೀಕರಿಸೆನ್ನನು ಚಿನ್ಮಯ ಸದ್ಗುರುವೇ
ಜಯ ಜಯ ಶಂಕರ ಹೇ ಪ್ರಭುವೇ
ಗುರುರಾಯಾ ಗುರುರಾಯಾ ಶ್ರೀಗುರುಶಂಕರ ಯತಿರಾಯಾ ||ಕಾ

## ಶರಣು ಶರಣು ಶ್ರೀ ಶಂಕರಾ

ಶರಣು ಶರಣು ಶ್ರೀ ಶಂಕರಾ|
ಪರಮೇಶನಾ ಅವತಾರನೇ||

ಕಾಲಟಿವಾಸನೆ ಶಿವಗುರುಪುತ್ರನೇ|
ಆದಿಗುರೂ ಎನಿಸಿ ಅವತಾರ ಗೈದನೆ|
ಬಾಲ್ಯತನದೆ ಸನ್ಯಾಸವ ಧರಿಸಿದ|
ಗುರುಶಂಕರಾ| ವಂದಿಪೆ ಯತಿವರಾ ||ಶರಣು||

ಭಸ್ಮರುದ್ರಾಕ್ಷಿಯ ಧರಿಸಿರುವಾತನೆ|
ಕೈಯ್ಯೊಳು ದಂಡವ ಪಿಡಿದಿಪ ದೇವನೆ|
ಅದ್ವೈತ ಮಹತತ್ವ ಲೋಕಕೆ ಸಾರಿದ|
ಶ್ರೀ ಶಂಕರಾ ವಂದಿಪೆ ಯತಿವರಾ ||ಶರಣು||

ಶೃಂಗೇರಿ ಶಾರದೆ| ಹೊರನಾಡ ಅನ್ನಪೂರ್ಣೆ|
ಕೊಲ್ಲೂರ ಕ್ಷೇತ್ರದ ಮೂಕಾಂಬೆ ದೇವಿಯ|
ಶ್ರೀ ಚಕ್ರದೊಳು ಸ್ಥಾಪಿಸಿದ ಮಹಿಮನೆ|
ಗುರು ಶಂಕರಾ ವಂದಿಪೆ ಯುತಿವರಾ ||ಶರಣು||

ಸರ್ವಜ್ಞಪೀಠದ ಜಗದ್ಗುರುವರನಾಗಿ|
ಸರ್ವ ಶಾಸ್ತ್ರಗಳಿಂದ ಶೋಭಿಪ ಯತಿಯಾಗಿ|
ಅಜ್ಞಾನದಿ ನರಳುತಲಿಪ ಮನುಜಗ|
ಆತ್ಮಜ್ಞಾನದ ನಿಧಿಯ ತೋರಿದ ಗುರುವೇ||
||ಶರಣು ಶರಣು ಶ್ರೀಶಂಕರಾ||



## ರಾಘವೇಂದ್ರ ರಾಘವೇಂದ್ರ

ರಾಘವೇಂದ್ರ ರಾಘವೇಂದ್ರ ರಾಘವೇಂದ್ರ ರಕ್ಷಿಸು
ರಾಗಭಾವಗಳು ನಮ್ಮ ಕಾಡದಂತೆ ಕರುಣಿಸು
ರಾಘವೇಂದ್ರಾ ... ಗುರು ರಾಘವೇಂದ್ರಾ ...... ||ಪ||

ಘನ್ನ ಮಹಿಮ ಗುರುದೇವ ನೀನು ಒಲಿದು ಹರಸು
ನಿತ್ಯ ನಿನ್ನ ಸೇವೆಗೈವ ಭಾಗ್ಯವ ದಯಪಾಲಿಸು
ರಾಘವೇಂದ್ರ.. ಗುರು ರಾಘವೇಂದ್ರ ||ರಾಘವೇಂದ್ರ||

ವೇದಶಾಸ್ತ್ರ ಮೀಮಾಂಸಾ ಪಾಂಡಿತ್ಯವನರಿಯೆ
ನಿನ್ನ ನಾಮ ತಾರಕವಾ ಎಂದು ನೀಡು ಯತಿಯೇ
ರಾಘವೇಂದ್ರ ... ರಾಘವೇಂದ್ರಾ ||ರಾಘವೇಂದ್ರ||

ಕಾಮಧೇನು ಕಲ್ಪವೃಕ್ಷ ಎಲ್ಲ ನೀನೇ ತಂದೆಯೇ
ಮುಕ್ತಿಯ ಪಥಕೊಯ್ಯು ನಮ್ಮ ಕಾಯಬೇಕು ಯತಿಯೇ
ರಾಘವೇಂದ್ರ ... ಗುರು ರಾಘವೇಂದ್ರಾ ||ರಾಘವೇಂದ್ರ||

## ಬಾಳ ಬೆಳಕಾಗಿ ಬಂದ

ಬಾಳ ಬೆಳಕಾಗಿ ಬಂದ ನೋಡು ರಾಘವೇಂದ್ರ|
ಭಕ್ತಿ ಭಾವಕಿಂದು ಒಲಿದು ಬಂದ ರಾಘವೇಂದ್ರ|

ರಾಘವೇಂದ್ರಾ ... ಗುರುರಾಘವೇಂದ್ರಾ ..
ರಾಜೀವ ಲೋಚನ ರಾಘವೇಂದ್ರ||

ಸಂಸಾರ ಸಾಗರವ ದಾಟಿಸುತಾ|
ಮಾಯಾ ಘನಘೋರ ತಾಪವ ತಾ ನೀಗುತ|
ಮನಕೆ ಸುಖ ಶಾಂತಿ ಸಮೃದ್ಧಿ ತಾ ನೀಡುತ|
ಬಾಳ ಬವಣೆಗಳು ಕಾಡದಂತೆ ತಲೆ ಕಾಯುತಾ||

ರಾಘವೇಂದ್ರ ಗುರು ರಾಘವೇಂದ್ರ|
ರಾಜೀವ ಲೋಚನ ರಾಘವೇಂದ್ರಾ||

ಗಾಢಾಂಧಕಾರವನು ತಾ ಹರಿಸುತ|
ಮನದಜ್ಞಾನ ಪೊರೆಯನು ತಾ ಕಳಚುತ|
ಈ ನರಜನ್ಮ ಸಾರ್ಥಕದ ಪರಿ ತಿಳಿಸುತ|
ಪಾದ ಕಮಲಕ್ಕೆ ಕೈ ಹಿಡಿದು ಕರದೊಯ್ಯುತ|

ರಾಘವೇಂದ್ರಾ ... ಗುರುರಾಘವೇಂದ್ರ|
ರಾಜೀವ ಲೋಚನ ರಾಘವೇಂದ್ರಾ||

ಬಾಳ ಬೆಳಕಾಗಿ ಬಂದ ನೋಡು ರಾಘವೇಂದ್ರ|
ಭಕ್ತಿಭಾವಕಿಂದು ಒಲಿದು ಬಂದ ರಾಘವೇಂದ್ರ||

## ದಯೆ ತೋರೋ ಗುರು

ದಯೆತೋರೋ ಗುರು ರಾಘವೇಂದ್ರಾ| ಮಂತ್ರಾಲಯವಾಸೀ ಯತೀಂದ್ರಾ||
ಹೃದಯ ಬೃಂದಾವನಾ ಕಾದಿದೆ ನಿನಗೆ| ಬಂದು ನೆಲೆಸೋ ಯೋಗೀಂದ್ರಾ ||ದ

ನಿನ್ನಯ ಅಡಿಗಳ ಸೇವಿಸದಾದೊಡೆ ಜನ್ಮವಿನ್ನೇತಕೋ ಗುರುದೇವಾ?
ಸಾವಿರ ಮಾತುಗಳಾಡಿರೆ ಫಲವೇನೊ? ನಿನ್ನಯ ನಾಮವೊಂದಿಲ್ಲದೊಡೆ||
||ದ

ನೀ ಕಾಯಬೇಕೋ ನೀ ನೊಲಿಯಬೇಕೊ |
ಅರಿಷಡ್ವರ್ಗವು ಸುಡದ್ಹಾಗೆ
ಈ ಭವಸಾಗರ ದಾಟಿಸಬೇಕೋ|
ಬಾಳಿನ [illegible] ...ಾಗೇ ... ||ದಯೆ||

ಮನವು ನಿನಗಾಗಿ ಕರಗಿ ನೀರಾಗಿ। ತೊಳೆಯಲೀ ನಿನ್ನ ಪಾದಾ
ಚರಣಕ್ಕೂವಾಗಿ ತನುವು ಮುಡಿಪಾಗಿ। ಸೇರಲೀ ನಿನ್ನ ಪಾದಾ
ಚಿಂತೆ ನಮಗೇಕೆ ಭಯವು ಇನ್ನೇಕೆ? ನೀನೆ ಕಾಯುತಿರುವಾಗ
ತಂದೆ ತಾಯಿ ಗುರುಬಂಧುಬಳಗವು। ಎಲ್ಲ ನೀನೇ ಆದಾಗಾ ||ದಯೆ||

## ಬಾರಯ್ಯ ಗುರು ರಾಘವೇಂದ್ರಾ ...

ಬಾರಯ್ಯ ಗುರು ರಾಘವೇಂದ್ರ।
ಭಕ್ತರಿಗಿಂದು ಅಭಯವ ನೀಡಲು ||ಬಾರಯ್ಯ||

ಬಾರಯ್ಯ .. ಬಾರಯ್ಯ .. ದೀನರ ಮೊರೆಯಾ ಕೇಳಯ್ಯ
ಕಾದಿರುವಾ ಭಕ್ತರಿಗೆ ದರುಶನವಾ ನೀಡಯ್ಯಾ||

ಎಲ್ಲವ ತೊರೆದೂ ... ಓಡಿ ಬಂದಿಹರೋ
ಹಗಲಿರುಳೆನ್ನವೇ ನಿನಗೆ ಕಾದಿಹರೊ
ನಿನ್ನಾರಾಧನೆ ನಿನ್ನಯ ಸೇವೆಗೇ
ತನುಮನ ಮುಡಿಪಾಗಿರಿಸಿಹರೋ ||ಬಾರಯ್ಯ||

ಏಕೋ ಇನ್ನು ಮೌನ। ಭಕ್ತಿಯು ಸಾಲದಾಯ್ತೆ ಇನ್ನಾ
ಹೇಳೋ ಏನು ಮಾಡಲಿನ್ನಾ । ಒಲಿಯೋ ಜೀವ ಹೋಗೂ ಮುನ್ನಾ
||ಬಾರಯ್ಯ||

ಕೂಗಿಕೂಗಿ ನಿನ್ನಾ। ಗಂಟಲೊಣಗಿತೋ
ಕಾದು ಕಾದು ನಿನ್ನಾ ಕಣ್ಣು ಮಂಜಾಯಿತೊ
ಬೃಂದಾವನದೊಳು ಬೆಚ್ಚಗೆ ಕುಳಿತರ
ಕಾಯುವರಾರಯ್ಯಾ ಈ ಪಾಮರನಾ ||ಬಾರಯ್ಯ||

||ಬಾರಯ್ಯಾ ಗುರು ರಾಘವೇಂದ್ರಾ||

# ಮೈಯ್ಯಮರೆತು ಬನ್ನಿರಿ

ಮೈಯ್ಯಮರತು ಬನ್ನಿರಿ। ಆರಾಧನೆ ಮಾಡಿರಿ।
ಇಂಥ ಪುಣ್ಯ ಸೇವೆಯೊಳು। ಭಾಗಿಯಾಗಿ ನಲಿಯಿರಿ ||ಪ||

ದೇವ ದೇವ ಪುರುಷೋತ್ತಮ ಯತಿರಾಜನ ನೋಡಿರಿ।
ಕಣ್ಣತುಂಬಿ ಅವನ ದಿವ್ಯ ದರುಶನವಾ ಪಡೆಯಿರಿ ||ಅ.ಪ||

ಎಷ್ಟೆಷ್ಟು ಸವಿದರೂ ತಣಿಯದಂಥ ಸವಿದಿನ।
ಜನ್ಮಾಂತರ ಪಾಪವದೂ ತೊಳೆಯುವಾ ಪುಣ್ಯದಿನ।
ರಾಘವೇಂದ್ರ ಭಕ್ತರೊಡನೆ ಕೂಡಿನಲಿವ ಶುಭದಿನ।
ಜನುಮ ಸಾರ್ಥಕವ ಗೊಳಿಸೆ ದೊರಕಿದಂತ ಸುದಿನ ||ಮೈಯ್ಯ

ಇಳೆಯು ಸ್ವರ್ಗವಾಗಿದೆ ಜಗಕೆ ಸುಗ್ಗಿ ತಂದಿದೆ।
ರಾಘವೇಂದ್ರ ರಾಘವೇಂದ್ರ ಜಯ ಘೋಷವು ಮೊಳಗಿದೆ।
ಜೀವ ದೇಹಭಾವ ಮರೆತು ಆನಂದದಿ ಹಿಗ್ಗಿದೆ।
ರಾಘವೇಂದ್ರ ಗುರುದೇವರ ಕೊಂಡಾಡಿ ನಲಿದಿದೆ ||ಮೈಯ್ಯ

ನಿಮ್ಮ ಭಜನೆ ಕೇಳಿ ಗುರುವು ವೀಣೆಯನ್ನು ನುಡಿಸುವ।
ದಿವ್ಯ ದೃಷ್ಟಿಯನ್ನು ಬೀರಿ ಭಕ್ತಿ ಭಾವ ತುಂಬುವ।
ಮಂತ್ರಾಕ್ಷತೆ ನೀಡಿ ಹರಸಿ ಸಕಲ ಭಾಗ್ಯ ನೀಡುವ।
ಮಗುವೆ ಬಾ ಎಂದು ಕೂಗಿ ತಬ್ಬೀ ಮುದ್ದಾಡುವ||

||ಮೈಯ್ಯ ಮರೆತು ಬನ್ನಿರಿ। ಆರಾಧನೆ ಮಾಡಿರಿ||

# ಜಗದೋದ್ಧಾರಕ

ಜಗದೊದ್ಧಾರಕ । ಭಾರ್ಗವ ರಾಮಾ ...
ದಾರಿಯ ತೋರೋ ... ಕಾಮಿತ ಧಾಮಾ....
ನಿನ್ನಯ ನಾಮವೆ ಪಾವನ ನಾಮಾ....
ರೇಣುಕ ಪ್ರಿಯ ಪುತ್ರ ಪರುಶುರಾಮಾ....॥

ಜಯ ಬ್ರಹ್ಮಚಾರೀ... ಹೇ ಕಾಮವೈರೀ....
ಭವ ಭಯ ಹಾರೀ.... ದುಷ್ಟ ಸಂಹಾರೀ
ಸಾತ್ವಿಕ ಮುನಿಜನ । ಹೃದಯ ವಿಹಾರೀ
ಲೀಲಾ... ನಾಟಕ ಸೂತ್ರಧಾರೀ.... ॥ಜಗ॥

ಓ... ನನ್ನ ತಂದೇ ನೀ ಗತಿ ಎಂದೇ।
ನಂಬಿ ನಾ ಬಂದೇ ದಯೆ ತೋರು ಇಂದೆ ।
ಭವದೊಳು ನೊಂದೇ ಕಾಪಾಡು ತಂದೇ ...
ಸದ್ಗುರುವೇ ನಿನಗೇ ಶರಣು ಬಂದೇ ॥ಜಗ॥

ಜಮದಗ್ನಿಯೊಳು ಕ್ರೋಧವ ಸುಟ್ಟೆ ।
ವಧಿಸಿದ ಮಾತೆಗೇ ಜನ್ಮವ ಕೊಟ್ಟೆ ।
ಗತಿಸಿದ ಸೋದರರ ಬದುಕಿಸಿ ಬಿಟ್ಟೆ ।
ಭೂ ಭಾರವನು ಇಳಿಸಿ ಬಿಟ್ಟೆ ॥ಜಗ॥

ರಾಮಾ.... ರಾಮಾ. ಭಾರ್ಗವ ರಾಮ ।
ಹೃದಯದಿ ನಿಲ್ಲಿಸೋ ಪಾವನ ನಾಮಾ...
ಜಯ ಜಯವಾಗಲಿ ಕಲ್ಯಾಣರಾಮಾ....
ದೇವಾದಿ ದೇವ ಪರುಶುರಾಮಾ.... ॥ಜಗ॥

# ಚಿಂತೆ ಏಕಣ್ಣ

ಚಿಂತೆ ಏಕಣ್ಣಾ ನಿಶ್ಚಿಂತೆಯಿಂದ ನೆನೆಯಣ್ಣಾ
ವೀರ ಪರಶುವಾ ಹೆಗಲೊಳಿಟ್ಟ ಮಹ
ವೀರ ಪುರುಷ ನಿರಲು ||ಚಿಂತೆ ಏಕಣ್ಣಾ ||

ಸಾಮಾನ್ಯನಲ್ಲವೊ... ಇವ |
ಜಗವೇಕ ವೀರ| ಲೋಕೈಕ ಶೂರ |
ಜಗಜಟ್ಟಿ ಪರಶುವಿರಲೂ ||ಚಿಂತೆ ಏಕಣ್ಣಾ||

ಶ್ರೀಹರಿಯ ಅವತಾರಿ ಇವನೂ |
ಜಮದಗ್ನಿ ರೇಣುಕೆಯ ಸುತನೂ |
ಪರಮೇಶನಿಂದ ಪರಶುವನು ತಂದ |
ಪರಮಾತ್ಮ ಗುರುವು ಇರಲೂ ||ಚಿಂತೆ ಏಕಣ್ಣಾ||

ಗಂಡುಗೊಡಲಿಯಾ ಹಿಡಿದು |
ಸಹಸ್ರ ಬಾಹುವಾ ತರಿದು |
ಜಗಗಂಡ ರಾಮ| ಮಾರ್ತಾಂಡ ಭೀಮ ||
ಜಗಜಟ್ಟಿ ರಾಮನಿರಲೂ ||ಚಿಂತೆ ಏಕಣ್ಣಾ||





# ಸಾಯಿನಾಥನ ಭಜನೆ

ಸಾಯಿನಾಥನ ಭಜನೆ ಮಾಡುವ ।
ಕೊಂಡಾಡಿ ಹಾಡಿ। ಸಾಯಿರಾಮನಲ್ಲೆ ಬೆರೆಯುವ ।
ಸಾಯಿರಾಂ ....। ಸಾಯಿರಾಂ ....।।

ನೇಮ ನಿಷ್ಠೆಯಿಂದ ನಡೆಯುವ ।
ಸಾಯಿರಾಮನ ಪಾದ ಕಮಲವನ್ನು ಸ್ಮರಿಸುವ ।
ಸಾಯಿರಾಂ... ಸಾಯಿರಾಂ... ।।ಸಾಯಿ।।

ಉಸಿರಿನಲ್ಲಿ ನಿನ್ನ ನಾಮವು ।
ಬೆರೆಯುತಿರಲು । ಹಸಿವಿನಲ್ಲು ನಿನ್ನ ಸ್ಮರಣವು ।।
ಸಾಯಿರಾಂ ಸಾಯಿರಾಂ ।।ಸಾಯಿ।।

ಪ್ರೇಮಮೂರ್ತಿ ಸಾಯಿಬಾಬಾರ। ಅನುಗ್ರಹವು ।
ಇರಲೆಮಗೆ ಭಯವಿಲ್ಲವು ।।
ಸಾಯಿರಾಂ ಸಾಯಿರಾಂ ।।ಸಾಯಿ।।

ಭಜಿಸಿರಲು ಅನವರತವು । ಸಾಯಿ ಚರಣ
ಪರಮ ಮೋಕ್ಷದಾಮಾರ್ಗವು ।।
ಸಾಯಿರಾಂ ... ಸಾಯಿರಾಂ... ।।ಸಾಯಿ।।

# ಸ್ವಾಮಿ ಶಿರಡಿ ಸಾಯಿ

ಸ್ವಾಮಿ ಶಿರಡಿ ಸಾಯಿಬಾಬಾ | ಎಂಥ ಮಹಿಮೆ ನಿನ್ನ ತ್ಯಾಗ |
ಕಾಣಬೇಕು ನಿನ್ನನೀಗ | ಏನುಮಾಡಲ್ಹೇಳು ಬೇಗ|
ಸಾಯಿಬಾಬನೇ.... ಮಾಯತೀತನೇ ||ಪ||

ನಾನು ನಿನ್ನ ಚರಣದಾಸ | ಕಾಯಬೇಕೊ ಶಿರಡಿ ವಾಸ|
ತೋರು ನಿನ್ನ ಮಂದಹಾಸ| ಇಷ್ಟು ತಾಳೆನೋ ಸಾಯೀಶ ||
ಸಾಯಿನಾಥನೇ.... ಮಾಯಾತೀತನೆ ||ಸ್ವಾ

ಅಜ್ಞಾನದಲ್ಲಿ ಮುಳುಗಿ | ನರಳುತಿರುವೆನಯ್ಯ ಕೊರಗಿ |
ಜನಿಸಲಾರೆ ನಯ್ಯಾ ತಿರುಗಿ |ಭವದ ಪಾಶದಲ್ಲೆ ಹುದುಗಿ |
ಸಾಯಿನಾಥನೇ.... ಮಾಯಾತೀತನೆ ||ಸ್ವಾ

ನಿನ್ನ ಹೊರತು ಅನ್ಯರಿಲ್ಲ | ಕಾಯವುದಕೆ ನಮ್ಮನೆಲ್ಲಾ |
ನಿನದೆ ಪಾಪ ಪುಣ್ಯವೆಲ್ಲ | ಅರ್ಪಿಸುವೆನು ನನ್ನದೆಲ್ಲಾ |
ಸಾಯಿನಾಥನೇ... ಮಾಯಾತೀತನೆ ||ಸ್ವಾ

ಬಂದೆನಯ್ಯ ನಿನ್ನನರಸಿ | ಹೃದಯದೊಳು ನೀನು ನೆಲಸಿ|
ನಮ್ಮ ಕಣ್ಣ ನೀರ ಒರೆಸಿ | ಮುಕ್ತಿ ನೀಡು ಕರುಣದಿ ಹರಸಿ||
ಸಾಯಿನಾಥನೇ....ಮಾಯಾತೀತನೇ|| ||ಸ್ವಾ

# ಶಿರಡಿ ವಾಸನೆ

ಶಿರಡಿ ವಾಸನೆ | ಚರಣ ಸೇವ್ಯನೆ|
ನಿರುತ ನಂಬಿ ಬೇಡುವರ | ಪೊರೆವೊ ದೇವನೆ ||ಪ||

ಮನದ ದುರ್ಗುಣ ಬಿಡಿಸಿ ಕಾಯ್ವನೆ |
ಆರು ಶತ್ರುಗಳ ಬಾಧೆ ಕಳೆವ ದೇವನೆ ||ಶಿ||

ಕಾಮಿತಾರ್ಥನ ಕಾಮಧೇನುವೇ।
ಇಷ್ಟಸಿದ್ಧಿಗಳನು ಕೊಡುವ ಕಲ್ಪವೃಕ್ಷವೇ ||ಶಿ||

ಸಾಧು ಸಂತರ ಹೃದಯ ವಾಸನೆ ।
ಸತ್ಯ ಧರ್ಮ ನ್ಯಾಯಕೆಂದು ಒಲಿವ ದೇವನೆ ||ಶಿ||

ಅಂಧಕಾರದೀ ತೊಳಲುತಿರುವರಾ ।
ಮರುಕಗೊಂಡು ಮಮತೆಯಿಂದ । ಅರಿವ ಕೊಡುವನೆ ||ಶಿ||

ಯಾರು ಇಲ್ಲವೋ । ಎಂದು ಕೂಗಲು ।
ಬಂಧುವಾಗಿ ಓಡಿ ಬಂದು ಕೈಯ್ಯ ಪಿಡಿವನೆ ||ಶಿ||

ಶಕ್ತಿ ಹೀನರ ಬಳಿಯೆ ಸಾರುತ ।
ಮಾತೆಯಂತೆ ಪ್ರೀತಿ ಎಂಬೊ ಸುಧೆಯ ನೀಯ್ವನೆ ||ಶಿ||
ನಿನ್ನ ಕಾಣಲು ನಿನ್ನ ಸೇರಲು ।
ಹಂಬಲಿಸುವವರ ಬಳಿಯೆ । ಬಂದು ನಿಲುವನ ||ಶಿ||

ಸದ್ಗುರುನಾಥನೆ । ಚಿನ್ಮಯ ರೂಪನೆ ।
ಭಕ್ತಿ ಮುಕ್ತಿ ನೀಡಿ ಕಾಯ್ವ । ಪರಮಹಂಸನೆ ||
||ಶಿರಡಿ ವಾಸನೆ||

## ಜೈ ಜೈ ಸಾಯಿರಾಂ

ಜೈಜೈ ಸಾಯಿರಾಂ । ಜೈಜೈ ಸಾಯಿರಾಂ।
ಜೈಜೈ ಸಾಯಿರಾಂ । ಬೋಲೊ ಜೈ ಜೈ ಸಾಯಿರಾಂ ||

ಪ್ರೇಮದಿ ಕೂಗೊ ಜಗದ ಒಡೆಯನಾ ಜೈ ಜೈ ಸಾಯಿರಾಂ
ಮಣಿಯುತ ಕೂಗೋ ಚರಣಕಮಲವ ಜೈಜೈ ಸಾಯಿರಾಂ ।
||ಜೈಜೈ ಸಾಯಿರಾಂ ಬೋಲೋ||

ಪಾಪವ ಕಳೆಯುವ ಪುಣ್ಯ ಪುರುಷನು ಜೈಜೈ ಸಾಯಿರಾಂ
ಪುಣ್ಯದ ಪಥಕೆ ಕೈಪಿಡಿದೊಯ್ವನು ಜೈಜೈ ಸಾಯಿರಾಂ ||
||ಜೈ ಜೈ ಸಾಯಿರಾಂ ಬೋಲೋ||

ರೋಗಾದಿಗಳನು ಹೊಡೆದೋಡಿಸುವನು ಜೈಜೈ ಸಾಯಿರಾಂ
ದುಷ್ಟರನ್ನೆಲ್ಲಾ ಶಿಷ್ಟರ ಮಾಡುವ ಜೈಜೈ ಸಾಯಿರಾಂ ।
||ಜೈಜೈ ಸಾಯಿರಾಂ ಬೋಲೋ||

ಶಾಕಿನಿ ಡಾಕಿನಿ ಭೂತ ನಿವಾರಕ ಜೈ ಜೈ ಸಾಯಿರಾಂ
ವೇದ ಶಾಸ್ತ್ರ ಸಕಲಾಗಮ ಪಂಡಿತ ಜೈಜೈ ಸಾಯಿರಾಂ ||
||ಜೈಜೈ ಸಾಯಿರಾಂ ಬೋಲೋ||

ಮಾತಾಪಿತ ಗುರು ಸಕಲ ಸೌಭಾಗ್ಯನು । ಜೈಜೈ ಸಾಯಿರಾಂ
ಮಹಾಯೋಗ ಶಕ್ತಿ ಕುಂಡಲಿನಿ ಪ್ರಭೋದಕ । ಜೈಜೈ ಸಾಯಿರಾಂ||
||ಜೈಜೈ ಸಾಯಿರಾಂ ಬೋಲೋ||

ಅನಾಥರಕ್ಷಕ ಆಪದ್ಬಾಂಧವ । ಜೈ ಜೈ ಸಾಯಿರಾಂ
ಭಕ್ತರಿಗೆಲ್ಲಾ ಮುಕ್ತಿಯ ನೀಡುವ ಶಕ್ತನು ಸಾಯಿರಾಂ ||
||ಜೈ ಜೈ ಸಾಯಿರಾಂ ಬೋಲೋ||

## ಭಕ್ತಿ ಗೊಲಿವ ಸಾಯಿ

ಭಕ್ತಿ ಗೊಲಿವ ಸಾಯಿ । ಮುಕ್ತಿ ನೀಡೊ ಮಾಯಿ।
ಚಿತ್ತದಲ್ಲಿ ನಿಂತ ನೋಡು । ಅವನೆ ತಂದೆ ತಾಯಿ ।
ನಮ್ಮ ಶಿರಡಿ ಸಾಯಿ ||ಪ||

ಕಷ್ಟದಲ್ಲಿ ಸಿಲುಕಿರುವಾಗ । ನಷ್ಟದಲ್ಲಿ ನರಳಿರುವಾಗ।
ಧೈರ್ಯನೀಡಿ ಆಸರೆಕೊಟ್ಟ । ಅವನೆ ತಂದೆತಾಯಿ ।
ನಮ್ಮ ಶಿರಡಿ ಸಾಯಿ ||ಭ||

ಜ್ಞಾನದಿಂದ ಹೀನನಾಗಿ । ಅಲೆಯುತಿರೆ ಹುಚ್ಚನಾಗಿ ।
ಬಂಧುವಾಗಿ ಬಂದು ಕಾಯ್ದ । ಅವನೆ ತಂದೆ ತಾಯಿ ।
ನಮ್ಮ ಶಿರಡಿ ಸಾಯಿ ||ಭ||

ರೋಗದಿಂದ ನರಳಿರುವಾಗ । ಎಲ್ಲ ದೂರ ನೂಕಿರುವಾಗ।
ಪ್ರೇಮದಿಂದ ಸೇವೆಗೈದ್ದ। ಅವನೆ ತಂದೆತಾಯಿ ।
ನಮ್ಮ ಶಿರಡಿ ಸಾಯಿ ||ಭ||

ಯೌವ್ವನವು ತುಂಬಿರುವಾಗ | ಮೋಹದಲ್ಲಿ ಸಿಲುಕಿರುವಾಗ|
ಅರಿವ ನೀಡಿ ಕಣ್ಣ ತೆರಸಿದ | ಅವನೇ ಸ್ನೇಹಜೀವಿ |
ನಮ್ಮ ಶಿರಡಿ ಸಾಯಿ ||

ಸಿರಿಯು ಕೂಡಿ ಬಂದಾಗ | ರಾಜ ಪದವಿಗೇರಿದಾಗ|
ದಾನ ಧರ್ಮಬುದ್ಧಿ ನೀಡಿ | ಕಾಯ್ದ ಶಿರಡಿ ಸಾಯೀ |
ಅವನೆ ತಂದೆ ತಾಯಿ

ಅಷ್ಟಮದವು ಕಾಡಿದಾಗ | ತಬ್ಬಲಿಯಂತಳುತಿರುವಾಗ |
ತಬ್ಬೀ ಮುದ್ದಾಡಿ ಒಲಿದ | ಅವನೆ ತಂದೆ ತಾಯಿ |
ನಮ್ಮ ಶಿರಡಿ ಸಾಯಿ

ಕಷ್ಟ ಸುಖದಿ ಒಂದಾಗಿ | ನಮ್ಮ ಬಾಳ ಸಾರಥಿಯಾಗಿ |
ಮುಕ್ತಿಯನ್ನು ಪಡೆಯುವತನಕ|
ಬರುವನವನೆ ಗುರುವಾಗಿ | ಅವನೆ ತಂದೆತಾಯಿ |
ನಮ್ಮ ಶಿರಡಿ ಸಾಯಿ |

||ಭಕ್ತಿ ಗೊಲಿವ ಸಾಯಿ||

## ಕೃಪೆಯ ತೋರಯ್ಯ

ಕೃಪೆಯಾ ತೋರಯ್ಯ ಗುರುವೇ ಸದ್ಗುರು ನಾಥ|
ಕೃಪೆಯ ತೋರಯ್ಯ ಗುರುವೇ|
ಆತ್ಮ ಸಂಧಾನ ದೊಡನೆ ಒಡನಾಡುತಿರುವೆ|
ಆನಂದದಿಂದ ಮತ್ತೇರಿ ನಗುತಿರುವೆ||
ಬ್ರಹ್ಮಾನಂದದಿಂದ ಮತ್ತೇರಿ ನಗುತ್ತಿರುವೆ ||

ಆತಂಕಗೊಂಡ ಜನರ ಮನದಳಲ ಹರಿಸುತ|
ಶಕ್ತಿಯ ಪಾತದಿಂದ ಮತ್ತೇ ಚೇತನ ತರುವೆ ||

ಅಂಬಿಗನಿಲ್ಲದೆ ಕಡಲ ಹಾಯುವುದುಂಟೆ|
ಗುರುವೆ ನೀನೊಲಿಯದೆ ಭವದಿಂದ ಪಾರುಂಟೆ ||

ಕುಂಡಲಿನಿ ಯೋಗವೆಂಬ ಬ್ರಹ್ಮವಿದ್ಯೆಯ ಜಗಕೆ।
ಆರ್ತಿಯಿಂ ತೋರಿದ ಶಕ್ತ ಧೀಮಂತ ಗುರುವೆ ||ಕೃಪೆ||

ಅಜ್ಞಾನವೆಂಬೊ ಕತ್ತಲು ಪರಿದೋಡುವುದು।
ನೀನು ದೃಷ್ಟಿಯ ಬೀರಲು।
ನೀನು ದೃಷ್ಟಿಯ ಬೀರಲು ಹರಿದೋಡುವುದು।
ಅಜ್ಞಾನವೆಂಬೊ ಕತ್ತಲು ||ಕೃಪೆ||

## ಏಕಚಿತ್ತದಿ

ಏಕಚಿತ್ತದಿ ಮನದೊಳು ನೆನೆಯಲು। ಬರುವರು ಬಾ... ಬಾ।
ಎಲ್ಲೇ ಇರಲಿ। ಎಂತೇ ಇರಲಿ। ಇರುವರು ಬಾಬಾ।
ಎದುರು ನಿಲುವರು ಬಾಬಾ। ಶಿರಡಿ ಸಾಯಿಬಾಬಾ||ಪ||

ಮಮತೆಯಿಂದ ಮೈದಡುವುತ। ದಣಿವಾರಿಸುವರು ಬಾಬಾ...
ಮನಸಿನ ಚಿಂತೆಯ ದೂರ ಮಾಡುತ। ನಗಿಸುವರು ಬಾಬಾ ....
||ಏಕ||

ನಾನಿರುವಾಗ ಭಯವೇಕೆನ್ನುತ। ನುಡಿವರು ಬಾಬಾ ....।
ಅಗ್ನಿಯೊಳ್ ಬಿದ್ದರು। ತನ್ನಮೈಒಡ್ಡುತ ಕಾಯ್ವರು ಬಾಬಾ ||ಏಕ||

ಆತ್ಮಕೆ ಶಾಂತಿಯ ನೀಡುತ। ಅಭಯವ ನೀಡುವ ಬಾಬಾ।
ಭಕ್ತರ ಹರಸುತ। ಆರ್ತರ ಸಲಹುತ। ಪೊರೆವರು ಬಾಬಾ ||ಏಕ||

ಕರೆದಲ್ಲೆ ಬರುವರು ಚೇತನ ಕೊಡುವರು।
ಚಿನ್ಮಯ ಗುರು ಬಾಬಾ। ನಮ್ಮ ಶಿರಡಿ ಸಾಯಿಬಾಬಾ ||ಏಕ||

ಭಕ್ತರ ಹೃದಯವೆ ತನ್ನಯ ನೆಲೆಯು। ಎನ್ನುವ ಬಾಬಾ।
ಮೃತ್ಯುವೆ ಬಂದರು। ಬಿಡದೆ ಓಡಿಸುವರು।
ಮೃತ್ಯುಂಜಯಬಾಬಾ|| ||ಏಕ||

ಭಕ್ತನ ಬಳಿಯಲಿ। ಕಾವಲು ಕಾಯುತ ನಿಲುವರು ಬಾಬಾ।
ತಂದೆ ತಾಯಿ ಗುರು ಬಂಧು ಬಳಗವೆಲ್ಲ। ಕರುಣಾಮಯಿ ಬಾಬಾ
ನಮ್ಮ ಶಿರಡಿ ಸಾಯಿಬಾಬಾ ..... ||ಏಕ||

# ಸಪ್ತ ಶರಧಿಯೊಳು

ಸಪ್ತಶರಧಿಯೊಳು ಸುಪ್ತವಾಗಿಪ
ಗುಪ್ತನಿಧಿಯ ತೋರೋ ... ಸದ್ಗುರುನಾಥ||
ಬಾ ಬಾ ಬಾ .... ಶಿರಡಿ ಬಾಬಾ|
ಬಾ ಬಾ ಬಾ ... ಶಿರಡಿ ಬಾಬಾ||

ಅರಸಿ ಬಂದೆನೊ ಆತ್ಮಕೆ ಶಾಂತಿಯ ದೇಶ ದೇಶ ತಿರುಗೀ|
ಅರ್ಥಿಯವಾದೆನಯ್ಯ ಅಂತರ್ಯಾಮಿಯ ದಾರಿ ತೋರೊ ಭರದೀ||
ಬಾ ಬಾ ಬಾ .... ಶಿರಡಿ ಬಾಬಾ|
ಬಾ ಬಾ ಬಾ ... ಶಿರಡಿ ಬಾಬಾ ||ಸಪ್ತ||

ಗತಿ ನೀನೆನ್ನುತ ನಿನ್ನಡಿ ಬಿದ್ದೆನೊ| ಜ್ಞಾನ ಭಿಕ್ಷೆಯ ಬೇಡೀ|
ಮತಿಯನು ನೀಡೋ| ಮರ್ಮವ ತಿಳಿಸುತ| ಮಾಯ ಮುಸುಕ ದೂಡೀ||
ಬಾ ಬಾ ಬಾ ... ಶಿರಡಿ ಬಾಬಾ|| ||ಸಪ್ತ||

ತಂದೆ ತಾಯಿ ಗುರು ದೈವ ನೀನಲ್ಲದೆ| ಅನ್ಯರ ನಾಕಾಣೆ|
ಅರಿಯ ಬಾಧೆಯನೀಗಿ| ಪಾರುಮಾಡೆನ್ನುತ ಬೇಡುವೆ ನಿನ್ನಾಣೆ||
ಬಾ ಬಾ ಬಾ ... ಶಿರಡಿ ಬಾಬಾ ||ಸಪ್ತ||

ಮರಳಿಯತ್ನವ ಮಾಡಿ ಸೋತೆನೊ ಗುರುವೇ ದಾರಿಕಾಣೆ ಇನ್ನೂ|
ಮಡಿಯುವ ಮುನ್ನ| ಮಾರ್ಗವ ತೋರೋ| ಮುಕ್ತಿದಾತಗುರುವೇ||
ಬಾ ಬಾ ಬಾ ಶಿರಡಿ ಬಾಬಾ| ಬಾ ಬಾ ಬಾ .... ಚಿನ್ಮಯ ಬಾಬಾ||
ಶಕ್ತಿ ದಾತ ಬಾಬಾ| ಮುಕ್ತಿದಾತ ಬಾಬಾ ||ಸಪ್ತ||

# ಆರಯ್ಯ ಎನ್ನ ಕಾಯ್ವರು

ಆರಯ್ಯ ಎನ ಕಾಯ್ವರು। ನೀ ಕೈಯ್ಯ ಬಿಡಲು।
ಆರು ಶತ್ರುಗಳೆನ್ನ ಅಟ್ಟಿಬರುತಿಪರು
ಶರಣಂ ಸಾಯೀಶಾ ... ಶರಣಂ ಸಾಯೀಶಾ॥ ॥ಆರಯ್ಯ॥

ಬಿಟ್ಟಿಹನು ರತಿದೇವನು ಹೂ ಬಾಣವನು
ಚಿತ್ತವನು ಹರಿದೊಗೆವನು।
ಕಡು ಲೋಭದಿಂಕೂಡಿ ಹಿರಿದ್ವಿರಿದು ತಿಂದುಂಡು।
ಕೈಚಾಚಿ ಬಾಚುತಲಿ ಸುಖ ಸೂರೆಗೈದರೋ।
ಶರಣಂ ಸಾಯೀಶಾ। ಶರಣಂ ಸಾಯೀಶಾ ॥ ಆರಯ್ಯ॥

ನನದೆಂಬ ಮದಕಾಡಿ ಮೋಹ ಕ್ರೋಧದಿ ಕೂಡಿ।
ಗುಡುಗುಟ್ಟಿ ಅಬ್ಬರಿಸಿ ನನ್ನನಾವರಿಸಿ।
ಗಿರಿ ಗಿಟ್ಟಲೆಯ ಮಾಡಿ ಬುಗುರಿಯಂತಾಡಿ
ಕರ್ಮ ಚಕ್ರದೊಳೆನ್ನ ಗಾಣವಾಡಿಪರೋ...।
ಶರಣಂ ಸಾಯೀಶಾ ಶರಣಂ ಸರ್ವೇಶಾ ॥ಆರಯ್ಯ॥

ಶರಣು ಬಂದೆನೊ ನಿನ್ನಲಿ । ಮಾಯ ಮುಸುಕ್ಹರಿ ದೂಗೆಯೊ ಭರದಿಂದಲಿ।
ಮತ್ತೆ ಜೇನ್ಹೊಣದಂತೆ । ಮುತ್ತದಂದದಿ ಚಿಂತೆ ।
ಚಿತ್ತವನು ನಿನ್ನಲಿ । ಇರಿಸೊ ಶಿರಡೀಶಾ ॥
ಶರಣಂ ಸಾಯೀಶಾ । ಶರಣಂ ಯತೀಶಾ ॥
॥ಆರಯ್ಯ ಎನ್ನ ಕಾಯ್ವರು॥





# ಶಿವಾ ಶಂಕರಾ

ಶಿವಾ .... ಶಂಕರಾ ... ಓಂ ಶಂಭೋ ಮಹಾದೇವಾ ....।
ಹರಾ .... ಶಶಿಧರಾ ... ಓಂ ಶಂಭೋ ಮಹಾದೇವಾ ....।

ಶಿವ ಶಿವ ಶಿವ ಶಿವ। ಹರಹರ ಹರ ಹರ। ಶಂಭೋ ... ಮಹಾದೇವಾ.
ಹರ ಹರ ಹರಹರ। ಶಿವಶಿವ ಶಿವಶಿವ। ಶಂಭೋ .... ಮಹಾದೇವಾ।।
।।ಶಿವಾ ... ಶಂಕರಾ।।

ಚಂದ್ರ ಚೂಡಾ ಗಿರಿಜ ರಮಣಾ।
ನೀಲ ಕಂಠಾ ನಾಗಭರಣ।
ಭಕ್ತ ಪೋಶಾ ಕರುಣ ಚರಣಾ।
ನೀಳ ಜಟಾ ಕಾಮ ಹರಣಾ।।

।।ಶಿವ ... ಶಂಕರಾ। ಓಂ ಶಂಭೋ ... ಮಹಾದೇವಾ।।

ಫಾಲ ನೇತ್ರ ಫಣಿ ಭೂಷಣ।
ಪಿನಾಕೀ ... ನಂದಿ ವಾಹನಾ।
ನಟರಾಜಾ ಭಸ್ಮಧಾರಣಾ।
ಮುಕ್ಕಣ್ಣಾ ... ಲಯಕಾರಣಾ।।

ಶಿವ ... ಶಂಕರಾ। ಓಂ ... ಶಂಭೋ ಮಹಾದೇವಾ।
।।ಹರಾ ... ಶಶಿಧರಾ ...। ಓಂ .... ಶಂಭೋ ಮಹಾದೇವಾ।।

## ಕರುಣಾಳು ಶಿವನೆ

ಕರುಣಾಳು ಶಿವನೆ ಭಕ್ತ ಬಾಂಧವನೆ।
ಪೊರೆಯೋ ಹರನೇ ಶಶಿ ಶೇಖರನೇ।
ಆತ್ಮ ಶಿವ ಪರಮಾತ್ಮ ಶಿವ।
ಶಂಭೋ ಶಂಕರ ಗೌರಿಶಿವ ||ಪ|

ಕಾಯಲಿಲ್ಲವೆ ದೊರೆಯೇ ಬೇಡರ ಕಣ್ಣನ।
ಮೃತ್ಯುವಿಂದುಳಿಸಿದೆ ಭಕ್ತ ಮಾರ್ಕಂಡನ।
ಕಡೆಗಣ್ಣಿಂದಾದರು ನೋಡೋ ಈ ಪಾಮರನ
||ಕರುಣಾಳು ಶಿವನೆ||

ದೇಹಾರ್ಧವನೇ ನೀಡಿದೆ ಗಿರಿಜೆಗೆ।
ಆತ್ಮಲಿಂಗವನಿತ್ತೆ ಭಕ್ತರಾವಣಗೆ।
ನಿನ್ನಯಲೀಲೆಗೆ ಎಣೆಯುಂಟೆ ದೇವನೆ
||ಕರುಣಾಳು ಶಿವನೆ||

## ಬಾರಯ್ಯ ಶಂಕರ

ಬಾರಯ್ಯ ಶಂಕರ ಹೃದಯ ಮಂದಿರಕೆ।
ಮುಡಿಪಾಗಿರುವೆನು ನಿನ್ನಯ ಪಾದಕೆ ||ಪ||

ಬಾರಯ್ಯ ದೊರೆ ಬಾರಯ್ಯ। ಬಾರಯ್ಯ ಪ್ರಭು ಬಾರಯ್ಯ।
ಶಿವ ಶಿವ ಶಿವ ಶಿವ। ಹರ ಹರ ಹರ ಹರ।
ಚಂದ್ರ ಮೌಳೀಶ್ವರ ಬಾರಯ್ಯ||
ನವರಸ ನಾಟ್ಯ ಕಲಾಕರ ಶಂಕರ। ನಂಜುಂಡೇಶ್ವರ ಬಾರಯ್ಯ।
ಪನ್ನಗಧರ ಶಿವ। ಪಾರ್ವತಿವಲ್ಲಭ। ಭಕ್ತವತ್ಸಲ ಬಾರಯ್ಯ|| ||ಬಾ

ತಾಳಲಾರೆನು ಇನ್ನು ಈ ಮೌನವೂ।
ಕಾಯಲಾರೆನೊ ಬಾರೊ ಬಹುಕಾಲವೂ।

ನೀನೊಲಿಯೆ ತಡಮಾಡೆ ಈ ದೇಹವೂ।
ಕಾಯುತಲಿಹುದೇನೊ ಈ ಆಯುವೂ ||ಬಾರಯ

ಹಿಮವಲ್ಲಿ ಹಿಮವಾಗಿ ನೀಕುಳಿತೆ ಏಕೆ?
ಕಲ್ಲಲ್ಲಿ ಕಲ್ಲಾಗಿ ಅಡಗಿರುವೆ ಏಕೆ?
ಕಾಲನೂ ಕರೆಯುತಿಹ ಕಾಣೆ ಇನ್ನೇಕೆ ..
ಓಡೋಡಿ ನೀ ಬಾರೋ। ನನ್ನ ಸೆನಿಹಕ್ಕೆ ||ಬಾರಯ

ಓಂ ಮೃತ್ಯುಂಜಯಾಯ ರುದ್ರಾಯ । ನೀಲಕಂಠಾಯಶಂಭವೇ
ಅಮೃತೇಶಾಯ ಶರ್ವಾಯ। ಮಹಾದೇವಾಯ ನಮಃ
ಓಂ ... ನಮಃ ಶಿವಾಯ। ಓಂ ನಮಃ ಶಿವಾಯ||
|| ಬಾರಯ್ಯ ಶಂಕರ ಹೃದಯ ಮಂದಿರಕೆ||

## ಸಾಂಬ ಸದಾಶಿವ

ಸಾಂಬಸದಾಶಿವ ಶಂಭೋ ಶಂಕರ।
ಗಿರಿಜಾರಮಣಾ .... ಮಾಂಪಾಹೀ ...||ಪ||
ಗಂಗಾಧರನೇ ... ಅಂಬಾಪ್ರಿಯನೇ।
ಚಂದ್ರಶೇಖರ ಮಾಂಪಾಹೀ ...।
ಮಾಂ ಪಾಹೀ ಶಿವ। ಮಾಂ ಪಾಹೀ ..।
ಮಾಂ ಪಾಹೀ ಶಿವ। ಮಾಂ ಪಾಹೀ ...||ಅ.ಪ||

ಜಟಾಜೂಟಧರ। ಗಜ ಚರ್ಮಾಂಬರ। ಉರಗ ಭೂಷಣನೆ ಮಾಂಪಾಹಿ।
ಧಿದ್ಧಿಮಿ ಧಿಮಿಕಿಟ। ನಾಟ್ಯ ಭಯಂಕರ। ಗೌರೀ ಪತಿಯೇ ಮಾಂಪಾಹೀ।
ಢಮಢಮ ಢಮರುಗ। ಮದ್ದಳೆ ಓಲಗ। ಓಂಕಾರಾ ಪ್ರಿಯ ಮಾಂಪಾಹಿ।
ಭೋಂ ಭೋಂ ಭೋಂ ಭೋಂ। ಭೋಲಾ ಶಂಕರ
ವಿಶ್ವನಾಥನೇ ಮಾಂಪಾಹೀ||
ಮಾಂಪಾಹೀ ಶಿವ। ಮಾಂಪಾಹೀ|| ಮಾಂಪಾಹೀ ಶಿವ। ಮಾಂ ಪಾಹೀ....||ಸಾಂಬ

ಸೋಮ ಸುಂದರ| ರುದ್ರಭಯಂಕರ| ವಿಶ್ವಾಭರಣಾ ... ಮಾಂಪಾಹೀ ...|
ಮಹಾಕಾಲ ಶ್ರೀ ಮಲ್ಲಿಕಾರ್ಜುನ| ಘೃಶ್ಣೇಶ್ವರ ಶಿವ ಮಾಂಪಾಹೀ|
ವೈದ್ಯನಾಥ ರಾಮೇಶ್ವರ ತ್ರ್ಯಂಬಕ| ಕೇದಾರೇಶ್ವರ ಮಾಂಪಾಹಿ|
ಓಂಕಾರೇಶ್ವರ ಸೋಮನಾಥ ಶಿವ| ಭೀಮಾಶಂಕರ ಮಾಂಪಾಹೀ|
ನಾಗಲಿಂಗ ಪಶುಪತೀನಾಥ| ಶ್ರೀ ನಂಜುಂಡೇಶ್ವರ ಮಾಂಪಾಹಿ
ಮುಕ್ತಿದಾತನೇ ಮಾಂಪಾಹೀ

ಜ್ಯೋತಿರ್ಲಿಂಗೇಶ್ವರ ಮಾಂಪಾಹೀ ....
ಮಾಂಪಾಹೀ ಶಿವ ಮಾಂಪಾಹೀ| ಮಾಂಪಾಹೀ ಶಿವ ಮಾಂಪಾಹೀ|| ||ಸಾಂ

## ಶಿವ ಶಿವ ಶಿವ

ಶಿವ ಶಿವ ಶಿವ| ಹರ ಹರ ಹರ| ಮಹ ದೇವ ನಮಃ||
ಹರ ಹರ ಹರ| ಶಿವ ಶಿವ ಶಿವ| ಶಂಭೋ ನಮಃ||
ಶಂಭೋನಮಃ| ಶಂಭೋನಮಃ ||ಪ||

ಮನವೆಂದು ಹಾತೊರೆಯಲಿ| ಶಿವ ನಿನ್ನ ಸೇವೆಗೆ|
ನಿನ್ನ ನಾಮವೆ ಜಪವಾಗಲಿ| ಉಸಿರಿರುವಾವರೆಗೇ ||ಶಿವ||

ಜನುಮ ವೆಷ್ಟೆ ಬಂದರು| ನಿನ್ನಲಿ ಭಕ್ತಿ ಬೇಡುವೆ|
ಏನೆ ಕರ್ಮವಿದ್ದರೂ| ನೀನೇ ಗತಿ ಎನ್ನುವೆ ||ಶಿವ||

ಕೋಟಿ ಕೋಟಿ ಹೊನ್ನೆಕೊಡಲು| ನಿನ್ನಲಿಂಗ ಮಾಡುವೆ||
ಸಾಟಿ ಇಲ್ಲದ ನಿನ್ನ ಕರುಣೆಗಾಗಿ| ಎಂದು ಬೇಡುವೆ ||ಶಿವ||
||ಶಿವ ಶಿವ ಶಿವ| ಹರ ಹರ ಹರ||

# ನಮಃ ಶಿವಾಯ

ನಮಃ ಶಿವಾಯ। ನಮಃ ಶಿವಾಯ। ಓಂನಮಃಶಿವಾಯ।
ನಮಃ ಶಿವಾಯ। ನಮಃ ಶಿವಾಯ। ಓಂನಮಃಶಿವಾಯ।

ಓಂ ನಮಃ ಶಿವ। ಓಂ ನಮಃ ಶಿವ। ಓಂ ನಮ ಶಿವ ನಮಃ।
ಓಂ ನಮಃ ಶಿವ। ಓಂ ನಮಃ ಶಿವ। ಓಂ ನಮ ಶಿವ ನಮಃ ||ಅ.ಪ||
ಓಂ ನಮಃ ಶಿವ ಎನ್ನಲು। ಭವದ ತಾಪ ಕಳೆವುದು।
ಶಿವನ ಜಟೆಯ ಗಂಗೆ ಇಳಿದು। ಪಾಪವೆಲ್ಲ ತೊಳೆವುದು ||ಓ

ಓಂ ನಮಃ ಶಿವ ಎನ್ನಲು। ಯೋಗ ಮಾಯೆ ಕಳೆವುದು।
ಶಿವನ ಅಗ್ನಿ ಕಣ್ಣು ತೆರೆದು। ಅಜ್ಞಾನವ ಸುಡುವುದು। ||ಓ

ಓಂ ನಮಃ ಶಿವ ಎನ್ನಲು। ಸುಖ ಶಾಂತಿಯು ದೊರೆವುದು।
ಶಿವನ ಕಾಳ ಸರ್ಪ ಬಂದು। ಬಾಳನಂಜಕುಡಿವುದು। ||ಓ

ಓಂ ನಮಃ ಶಿವ ಎನ್ನಲು। ರೋಗ ಬಾಧೆ ಕಳೆವುದು।
ನೀಲಕಂಠ ಕೊರಳ ಜ್ವಾಲೆ। ಗ್ರಹ ದೋಷವ ಸುಡುವುದು। ||ಓ

ಓಂ ನಮಃ ಶಿವ ಎನ್ನಲು। ಅಪಮೃತ್ಯುವು ಕಳೆವುದು।
ಶಿವ ತ್ರಿಶೂಲ ನುಗ್ಗಿ ಬಂದು। ಮೃತ್ಯುಪಾಶ ಸೆಳೆವುದು। ||ಓ

ಓಂ ನಮಃ ಶಿವ ಎನ್ನಲು। ಶತ್ರುಭಯವು ಕಳೆವುದು।
ಶಿವಢಮರುಗ ಶಬ್ದಕೇಳಿ। ಭೂತ ಪ್ರೇತ ಓಡ್ವುದು। ||ಓ

ಓಂ ನಮಃ ಶಿವ ಎನ್ನಲು। ಶಿವನ ಕೃಪೆಯು ದೊರೆವುದು।
ಶಿವನ ವೃಷಭ ಬಂದು। ಕೈಲಾಸಕೆ ಕರೆದೊಯ್ವುದು||

ಓಂ ನಮಃ ಶಿವ। ಓಂ ನಮಃ ಶಿವ। ಓಂ ನಮ ಶಿವ ನಮಃ।
ಓಂ ನಮಃ ಶಿವ। ಓಂ ನಮಃ ಶಿವ। ಓಂ ನಮ ಶಿವ ನಮಃ ||
ನಮಃ ಶಿವಾಯ। ನಮಃ ಶಿವಾಯ। ಓಂ ನಮಃ ಶಿವಾಯ।
ನಮಃ ಶಿವಾಯ। ನಮಃ ಶಿವಾಯ। ಓಂ ನಮಃ ಶಿವಾಯ।
||ಓಂ ನಮಃ ಶಿವಾಯ||

# ಹರ ಓಂ ಹರ ಓಂ

ಹರ ಓಂ ... ಹರ ಓಂ .. ಹರ ಓಂ .. ಸದಾಶಿವಾ।
ಹರ ಓಂ ... ಹರ ಓ..ಓಂ। ಓಂ ನಮೋ ನಮೋಪರಮಾತ್ಮಶಿವ॥

ತ್ರಿಪುರಾರಿ ತ್ರಿಕಾಲ ತ್ರಿನೇತ್ರ ತ್ರಿಶೂಲಿ। ತ್ರಿಪುಂಡ್ರ। ತ್ರ್ಯಂಬಕ ಭವದೂರಾ ...॥
ತತ್ತೊಂ ತ್ಧೋಂ ಕಿಟ। ತಾಂ ತಾಂ ಧೀಂಕಿಟ ತಾಂಡವ ನೃತ್ಯ ಕಲಾಧಾರಾ ....॥
॥ಹರ ಓಂ

ಭರ ಭರ ಭರದಿಂ ಭೋರ್ಗರೆಯುತ।
ಭುವಿಗಿಳಿದಿಹ ಗಂಗ ಜಟಾಧರ॥

ರವ ರವ ರುದ್ರಭಯಂಕರ ವಿಷವಂ।
ಪಾನಗೈದ ಪ್ರಳಯಾಂತಕ॥ ॥ಹರ ಓಂ

ಸುಡು ಸುಡು ಅಗ್ನಿತ್ರಿನೇತ್ರದಿ ದಹಿಸಿದ
ಕಾಮವೈರಿ ಮದನಾಂತಕ॥

ಧಗಧಗಿಸುವ ಕೋಪದಿ ದಕ್ಷ ನಳಿಸಿದ
ಕಾಲಭೈರವ ಅಸುರಾಂತಕ॥
॥ಹರ ಓಂ ... ಹರ ಓಂ .. ಹರ ಓಂ .. ಸದಾಶಿವಾ॥

# ಗೌರೀಪತಿ ಶಿವ

ಗೌರೀ ಪತಿ ಶಿವಾ। ಪರಮಾತ್ಮಾ ಸುಂದರ।
ಶಂಭೋ ಶಂಕರಾ ಕಾಯೋ ಪುರಹರ।
ಶಂಭೋ ಶಂಕರಾ ಕಾಯೊ ... ಶಶಿಧರಾ ॥ಗೌರೀ॥

ಅನುದಿನವೂ ವ್ರತಗಳ। ಮಾಡುತಲೀ ಬಂದೆನೂ।
ಉಪವಾಸ ನೇಮದೀ। ಮನದಣಿಯಾ ಸೋತೆನೂ।
ಸುಖ ಶಾಂತೀ ನೆಮ್ಮದೀ। ನಾ ಇನ್ನೂ ಕಾಣೆನೂ ॥ಗೌರೀ॥

ಭವತಾಪಾ ಹರಿಯದೂ| ಬವಣೆಗಳೂ ಮುಗಿಯದೂ|
ಬಗೆ ಏನೋ ತಿಳಿಯದೂ| ನೀನೊಲಿವಾ ಪರಿಯದು||
ಆನಂದಾ ಕಾಣಲು| ನಾ ನಿನ್ನಾ ಸೇರಲು ||ಗೌರೀ||

ಶಿವ ನಿನ್ನಾ ಸೇವೆಯ| ಕೊನೆ ತನಕಾ ಕರುಣಿಸೊ|
ಮನ ನಿನ್ನಾ ಜಪದಲೀ| ಸ್ಥಿರವಾಗೇ ನಿಲ್ಲಿಸೋ|
ಇನ್ನಾವಾ ಮೋಹವೂ| ಸುಡದಂತೇ ಪಾಲಿಸೋ|
ಮುಕ್ತಿಯನೂ ಕರುಣಿಸೋ|| ಗೌರೀಪತಿ||

## ಭಜಿಸು ಭಜಿಸು

ಭಜಿಸು ಭಜಿಸು ಮನವೆ ಬವಣೆ ಬಿಟ್ಟು|
ಭಜಿಸು ಭಜಿಸು ಮನವೆ|
ಭವಪರಿತಾಪವ ಬಗೆ ಹರಿಸುವ ಶಿವ ||ಪ||

ಸಾವಿರ ಹಸ್ತವ ಹೊಂದಿರುವನು ಅವ
ಮೈಯ್ಯೆಲ್ಲ ಕಣ್ಣಾಗಿ ಕಾಯುತಿರುವ ಶಿವ ||ಭಜಿಸು||

ನಂಬಿದ ಭಕ್ತರ ಬೆನ್ನಹಿಂದೆ ತಿರುಗುವ|
ಕುಂದು ಕೊರತೆಗಳ ತಾನೇ ನುಂಗುವ ||ಭಜಿಸು||

ಕರಗಳ ಜೋಡಿಸಿ ಬೇಡುತಲಿರುವಾಗ|
ತುತ್ತನು ನಿನ್ನಯ ಬಾಯಿಗೆ ನೀಡುವ ||ಭಜಿಸು||

ಕಂಗಳ ಮುಚ್ಚಿ ಧ್ಯಾನಿಸುತಿರುವಾಗ|
ಕಾಲಕಂಟಕ ವಿಷ ತಾನೇ ಭರಿಸುವ ||ಭಜಿಸು||

# ಬಾರಯ್ಯ ಜಗದೀಶ್ವರಾ

ಬಾರಯ್ಯ ಜಗದೀಶ್ವರಾ। ಓ ತಂದೆ ನನ್ನಪ್ಪ ಪರಮೇಶ್ವರಾ ||ಪ||
ಕಾಪಾಡು ಬಾತಂದೆ ಶರಣಾಗಿ ನಾಬಂದೆ।
ಕರಮುಗಿದು ಬೇಡುವೆನು ನನ್ನಪ್ಪಾ ... ಬಾರಪ್ಪ||
ನನ್ನುಸಿರು ನಿನಗಾಗಿ। ನನ್ನೊಲವು ನಿನಗಾಗಿ
ಎಲ್ಲಾಸೆ ನಿನಗಾಗಿ ಇರಲಪ್ಪಾ ... ನನ್ನಪ್ಪ ||ಕಾಪಾಡು||

ಶಿವನೀನು ಕರುಣಾಳು ನಾನೆಂದು ನಿನ್ನಾಳು।
ನಿನ್ನಡಿಯ ಧೂಳಾಗಿ ಇರಿಸಪ್ಪಾ ನನ್ನಪ್ಪಾ।
ಹರನೀನೆ ಹರಿನೀನೆ ಜಗವಾಳೊ ದೊರೆ ನೀನೆ।
ನಿನ್ನ ನಾಮ ನೂರೆಂಟು ನನ್ನಪ್ಪಾ ಬಾರಪ್ಪ ||ಕಾಪಾಡು||

ಜಾತಿಯಾ ಹಂಗ್ಯಾಕೆ। ನೂರೆಂಟು ಡಂಭ್ಯಾಕೆ।
ಭಕ್ತಿ ಮಾತ್ರಕೆ ಒಲಿವ ನನ್ನಪ್ಪಾ
ನಿನ್ನಿಂದ ದೂರಾಗಿ ಕ್ಷಣಕಾಲ ಇರಲಾರೆ।
ನಿನ್ನಲೈಕ್ಯ ವನು ಮಾಡೊ ನನ್ನಪ್ಪಾ ಬಾರಪ್ಪ ||ಕಾಪಾಡು||

ನೂರಾರು ದೇವರಲಿ ನಾಮೊರೆಯ ನಿಡಲಾರೆ।
ಎನಮೊರೆಯ ನೀಕೇಳೊ ನನ್ನಪ್ಪಾ।
ನಿನ್ನ ಕೈಲಾಸಕ್ಕೆ ದಾರಿ ಕಾಣೆನು ನಾನು।
ಕರಪಿಡಿದು ಕರಕೊಳ್ಳೊ ನನ್ನಪ್ಪಾ ಬಾರಪ್ಪ ||ಕಾಪಾಡು||

ಭಜನೆಯೊಂದನು ಬಿಟ್ಟು ನನಗೇನು ತಿಳಿದಿಲ್ಲ।
ಮೈಮರೆತು ಕುಣಿಯುವೆವು ನನ್ನಪ್ಪಾ।
ನನ್ನ ಮಾತುಗಳೆಲ್ಲ ನಿನಗೆ ಬಿಲ್ವಾರ್ಚನೆಯು।
ನನ್ನ ಕಾಯಕವೆಲ್ಲ ನಿನಪಾದಕ್ಕೂವಾಗಿ ಇರಿಸಪ್ಪಾ ಬಾರಪ್ಪ|| ||ಕಾಪಾಡು||

ಏಳು ಕೋಟಿಯ ಶಿವನೆ ಎದ್ದೋಡಿ ಬಾರಪ್ಪ।
ನೀನೊಲಿಯೆ ಭಯವೆಲ್ಲಿ ನನ್ನಪ್ಪಾ
ಏನೇನೊ ಬೇಡುವೆನು ಎಂದೂಡ ಬೇಡಪ್ಪ।

ನನ್ನ ಕೈಯ್ಯ ಬಿಡಬೇಡ ನನ್ನಪ್ಪಾ ಬಾರಪ್ಪ||
ಶರಣು ಬಂದೆನು ನಿನಗೆ ಕರುಣೆ ತೋರೋ ಎನಗೆ|
ನಿನ್ನ ಭಕ್ತನಾಗಿರಿಸೊನನ್ನಪ್ಪಾ| ಜಗವೆಲ್ಲ ನಗುತಿರಲಿ ಹರಸಪ್ಪಾ|| ||ಕಾಪಾಡು||

## ಜೀವನಾ ಪಾವನಾ

ಜೀವನಾ ... ಪಾವನಾ .. ಅನುದಿನಾ| ನೆನೆದರೇ ಶಿವನಾ ||ಪ||
ಮೂರು ಕಣ್ಣುಳ್ಳ ಮುಕ್ಕಣ್ಣನಾ|
ಮೂರ್ಜಗ ಮೋಹಿಪ ಜಗದೀಶನಾ|
ಭಸ್ಮರುದ್ರಾಕ್ಷಿಯ ಧರಿಸಿಹನಾ|
ಚರ್ಮಾಂಬರಧಾರಿ ಶಶಿಧರನಾ ||ಜೀವನಾ||

ಓಂಕಾರಾಪ್ರಿಯ ಪರಶಿವನಾ|
ತಾಂಡವ ನೃತ್ಯ ಸದಾಶಿವನಾ|
ಭವರೋಗ ಹರ ವಿಧಾಯಕನಾ|
ಭಕ್ತರಿಗೇ ಮುಡಿಪಾದವನಾ ||ಜೀವನಾ||

ಜಟಾಜೂಟಧರ ಶಂಕರ ಭೈರವ| ವೀರ ಭದ್ರ ಅಸುರಾಂತಕ|
ಚಂದ್ರಮೌಳೀಶ್ವರ| ಪನ್ನಗಧರ ಹರ| ಕಾಮವೈರಿಲಯಕಾರಕ|
||ಜೀವನ ಪಾವನ||

ಗೌರೀಪತಿ ಗಜಮುಖ ಷಣ್ಮುಖಪಿತ| ನಂದಿ ವಾಹನ ಸರ್ವೇಶ|
ರುದ್ರ-ಸಾಮ-ಚಮ| ನಾಟ್ಯಗಾನಪ್ರಿಯ| ಬಿಲ್ವಾರ್ಚಿತ ಪ್ರಭೊ ಮಹೇಶಾ ....||
||ಜೀವನಾ ... ಪಾವನಾ||

## ಶಿವನಯ್ಯ ಶಿವನಯ್ಯ

ಶಿವನಯ್ಯ ಶಿವನಯ್ಯ । ಜಗದಯ್ಯ ಇವನಯ್ಯ ।
ಭಕ್ತರಾ ಬಾಳಿನಾ ಸಂಜೀವಿ ಇವನಯ್ಯ ।
ಭಕ್ತರಾ ಕಾಯುವಾ ನಿಸ್ಸೀಮ ಇವನಯ್ಯ ।
ಭಕ್ತರಿಗೇ ನೀಡದಾ ವರವೆ ಇಲ್ಲಯ್ಯ ॥

ಇಂಥಾ ಶಿವನ ಕಂಡಿರಾ । ಕರುಣಾಳು ಇಂಥಾ ಪ್ರಭುವ ಕಂಡಿರಾ

ಭಕ್ತರಿಗೆ ತನ್ನ ಭಾಗ್ಯವೆಲ್ಲವ ಕೊಟ್ಟು ।
ಭಸ್ಮವಿಭೂತಿಯ ಮೈಗೆಲ್ಲ ಬಳಿದಿಟ್ಟು ।
ಪಟ್ಟೆ ಪೀತಾಂಬರ ಎಲ್ಲ ಉಡುಗೆಯ ಬಿಟ್ಟು ।
ಭಕ್ತನ ಒಲಿಸಲು ಗಜಚರ್ಮವನೆ ತೊಟ್ಟ ।

ಇಂಥಾ ಶಿವನ ಕಂಡಿರಾ । ಕರುಣಾಳು ಇಂಥಾ ಪ್ರಭುವ ಕಂಡಿರಾ।

ದಶಕಂಠ ಗೊಲಿಯುತ್ತ ಆತ್ಮಲಿಂಗವನಿತ್ತ ।
ಭಕ್ತಿಗೆ ಮಣಿಯುತ್ತ ಗಿರಿಜೆಯನ್ನೇ ಇತ್ತ ।
ಭಕ್ತಮಾರ್ಕಂಡನ ಚಿರಂಜೀವಿಯಾಗಿಸಿ
ಬೇಡರ ಕಣ್ಣನ ಪೂಜೆಗೆ ಒಲಿದಂತಾ ।

ಇಂಥಾ ಶಿವನ ಕಂಡಿರಾ । ಕರುಣಾಳು ಇಂಥಾ ಪ್ರಭುವ ಕಂಡಿರಾ

## ನಿನ್ನ ಸ್ಮರಣೆಯೊಳೆನ್ನ

ನಿನ್ನ ಸ್ಮರಣೆಯೊಳೆನ್ನ ಕಾಯ ಸ್ಥಿರಗೊಳಿಸೋ ।
ನಿನ್ನ ಕರುಣೆಯೊಳೆನ್ನ ಕಾಯ ಶುದ್ಧಿಗೊಳಿಸೋ
ನಿನ್ನ ಚರಣದೊಳೆನ್ನ ಕಾಯ ಲಯಗೊಳಿಸೋ। ॥ಪ॥

ದಾಸನಾನಾದೆಯೋ ನಿಜಗುಣನೇ ।
ಭವ ತಾಪವ ಹರಿಸೋ ಭವಹರನೇ।

ಲೇಸಾಗಿ ಬದುಕಿಸೋ ಶುಭಕರನೇ |
ಎನ್ನ | ದೋಷರಹಿತ ಮಾಡೊ ಶಶಿಧರನೇ ||ನಿನ್ನ||

ವಿಷಯಾಸಕ್ತಿಯ ನೀ ಬಿಡಿಸೋ |
ಎನ್ನ | ಚಿತ್ತ ಶುದ್ಧಿಯ ಮಾಡಿ ಸ್ವೀಕರಿಸೋ |
ಹೃದಯ ಕಮಲದೊಳು ನೀ ನೆಲಸೋ |
ಮತ್ತೆ | ಜನನಮರಣ ಬೇಡ ಅನುಗ್ರಹಿಸೋ ||ನಿನ್ನ||

ದ್ವೇಷಾಸೂಯೆಯ ನೀ ಬಿಡಿಸೋ |
ಕಡುಪಾಪಗಳೆಲ್ಲವ ಪರಿಹರಿಸೋ |
ನಿನ್ನ ಭಕ್ತರ ಸಂಗದಿ ನೀನಿರಿಸೋ |
ಮುಕ್ತಿ | ಸಾಮ್ರಾಜ್ಯವ ನೀ ಕನಿಕರಿಸೋ||
|| ನಿನ್ನ ಸ್ಮರಣೆಯೊಳೆನ್ನಕಾಯ ||

## ತಿಳಿಯಲಾದಿತೇನೋ ನಿನ್ನ

ತಿಳಿಯಲಾದಿತೇನೋ ನಿನ್ನ ಸೃಷ್ಠಿರಹಸ್ಯವ |
ಅರಿಯಲಾದಿತೇನೋ ನಿನ್ನ ಈ ಮೋಹ ಜಾಲವಾ

ಆಡಲೆರಡು ಗೊಂಬೆಯ ಬಿಟ್ಟೆ | ಅದಕೆ ಕಾಮ ಸೂತ್ರವ ನಿಟ್ಟೆ|
ಪಾತ್ರಕೊಂದು ಪಾತ್ರವಾಗಿ | ಲೋಕವನ್ನೆ ಸೃಜಿಸಿ ಬಿಟ್ಟೆ

ಬೀಜದೊಳಗೆ ವೃಕ್ಷವ ನಿಟ್ಟೆ | ವೃಕ್ಷದೊಳು ಬೀಜವ ಬಿಟ್ಟೆ |
ಬೀಜವೃಕ್ಷ ನ್ಯಾಯದಲ್ಲಿ| ಲೋಕ ಕಣ್ಣ ಕಟ್ಟಿ ಬಿಟ್ಟೇ

ಜನ್ಮಕೊಂದು ಕಾರಣವಿಟ್ಟೆ| ಬಳಿದೆ ವಿಧಿಯ ಬರಹದ ಪಟ್ಟೆ |
ಜನ್ಮಕರ್ಮವೆಂಬೊ ಸುಳಿಗೆ | ನಮ್ಮನೇಕೆ ಸಿಲುಕಿಸಿ ಬಿಟ್ಟೆ ||
|| ತಿಳಿಯಲಾದಿತೇನೋ ನಿನ್ನ ||

# ಈ ಕಾಯದ್ವೊಲಪ

ಈ ಕಾಯದ್ವೊಲಸಾ ತೊಳೆಯೋ ಪ್ರಭೂ ।
ಈ ಮನದ ಕಲ್ಮಶ ಕಳೆಯೋ ವಿಭೂ ।
ಜ್ಞಾನದ ಕಣ್ಣನು ತೆರಸೋ ಪ್ರಭೂ ।
ಈ ಜೀವನ ಸಾರ್ಥಕಗೊಳಿಸೋ ವಿಭೂ॥
ಓಂ ಶಿವನೇ ಭವಹರನೇ। ಶಂಕರನೇ ಭೈರವನೇ ॥

ಕಾಮನ ವೈರಿಯು ನೀನಾಗಿ । ಕಾಮನಿಂದೇಕೆನ್ನ ಬಂಧಿಸಿದೆ॥
ಕಾಲಕಂಟಕ ವಿಷ ನೀನುಂಗೀ । ಈ ವಿಷಯದ ನಂಜೇಕೆ ಎನಗಿತ್ತೇ॥
ಓ ಶಿವನೇ ಭವಹರನೇ। ಶಂಕರನೇ ಶಶಿಧರನೇ ॥

ಜ್ಯೋತಿರ್ಲಿಂಗೇಶ್ವರ ನೀನಾಗೀ। ಆತ್ಮ ಜ್ಯೋತಿಯನೇಕೆ ತೋರಿಸದಾದೆ ।
ಮುಕ್ಕಣ್ಣ ಲಯಕಾರ। ಮೃತ್ಯುಂಜಯನಾಗೀ। ಕರ್ಮಬೀಜವನೇಕೆ ಸುಡದಾದೆ
ಮುಕ್ತಿಯದೇಕೇ ಕೊಡದಾದೇ॥
ಓಂ ಶಿವನೇ ಭವಹರನೇ । ಶಂಕರನೇ ಭೈರವನೇ ॥
॥ಈ ಕಾಯದ್ವೊಲಸ ತೊಳೆಯೋ ಪ್ರಭೂ॥





## ಅಮ್ಮ ನಿನ್ನ ದರುಶನ

ಅಮ್ಮ ನಿನ್ನ ದರುಶನ  ನಮಗೆ ಪುಣ್ಯ ಸೇಚನ
ನಿನ್ನ ಕರುಣೆ ನೋಟದಿಂದ ಧನ್ಯವಾಯ್ತು ಜೀವನ ||

ನಮ್ಮ ಪುಟ್ಟ ಹೃದಯದೊಳಗೆ ಆವರಿಸುತ ನಿನ್ನ ಧ್ಯಾನ |
ಓಂಕಾರ ಝೇಂಕರಿಸುತ  ಮಾಡಲಿ ಮಧುಪಾನ ||ಅವ

ನಿನ್ನ ಅಮೃತಗಾನಾ... ಸ್ವರ್ಗಕೆ ಸೋಪಾನಾ |
ಸ್ವಾರ್ಥ ಮೋಹವೆಲ್ಲ ಕಳಚಿ | ಸೇರಲಿ ಸನ್ನಿಧಾನ ||ಅವ

ದೇವಲೋಕದಿಂದ ಧರೆಗೆ  ಇಳಿದು ಬಂದ ಜನನೀ ...|
ಈ ಪಾಮರರಾ ಉದ್ಧರಿಸುವ ಪ್ರೇಮಮಯಿ ಕಲ್ಯಾಣೀ ||
||ಅಮ್ಮ ನಿನ್ನ ದರುಶನಾ||

## ಪಾಲಿಸೆ ಸದ್ಗುಣವಾ

ಪಾಲಿಸೆ ಸದ್ಗುಣವಾ ಶ್ರೀಶಾರದೆ | ಪಾಲಿಸೆ ಸದ್ಗುಣವಾ|
ಪಾಲಿಸೆ ಸದ್ಗುಣ ನೀಗುತ ದುರ್ಗುಣ |
ವಾಂಛಿತ ಫಲದೇ... ಅಭಯ ಪ್ರದಾಯಿನಿ ||
||ಪಾಲಿಸೆ ಸದ್ಗುಣವಾ||

ಪಾಪನಾಶಿನೀ ಪರಮ ಕಲ್ಯಾಣೀ....
ಪನ್ನಗ ವೇಣೀ.... ಕಲಿಮಲ ಹಾರಿಣಿ ||ಅ.ಪ

ಜ್ಞಾನದ ಕಣ್ಣನು ತೆರೆಯುತ ಕಾಯೆ |
ಜ್ಞಾನೇಶ್ವರಿ ಶ್ವೇತಾಂಬರಿ ತಾಯೇ ...|
ಮಾತೆ ಜ್ಞಾನದಾ ಸುಧೆಯನು ಕುಡಿಸೇ |
ಜ್ಞಾನದಾಯಿನೀ ಸರಸ್ವತಿಯೇ... ||ಪಾಲಿಸೆ||

ನಿನ್ನೀವೀಣೆಯ ಸ್ವರಗಳು ಮೀಟಲಿ |
ನನ್ನೀ ಹೃದಯದಿ ಭಕ್ತಿಯನು |
ನಿನ್ನೀ ಜಪಮಣಿ ಸ್ಪರ್ಶವ ನೀಡಲಿ |
ಅನುಗಾಲವು ನಿನ್ನ ಸ್ಮರಣೆಯನು |
ನಿನ್ನೀ ಹಸ್ತದ ಶುಕವದು ತಿಳಿಸಲಿ |
ನಿನ್ನ ಚರಿತದ ಮಹಿಮೆಯನು ||ಪಾಲಿಸೆ||

ಶೃಂಗೇರಿಯ ಸಿರಿ ಶಾರದ ಮಾತೆಯೆ |
ಶಂಕರ ಸ್ಥಾಪಿತ ಶ್ರೀಚಕ್ರ ವಾಸಿಯೇ
ಕೊಲ್ಲೂರಿನ ಸಿರಿ ವರ ಮೂಕಾಂಬೆಯೇ
ಹೊರನಾಡ ಅನ್ನಪೂರ್ಣೇಶ್ವರಿ ತಾಯೇ ||ಪಾಲಿಸೆ||

ನಿನ್ನಯ ಸುಂದರ ವದನದ ಬೆಳಕಲಿ |
ಬೆಳಗಿಸು ಆತ್ಮ ಜ್ಯೋತಿಯನು |
ನಿನ್ನೀ ಸೆರಗಿನ ಮರೆಯಲಿ ಹೊಂದುವೆ |
ನೆಮ್ಮದಿ ಶಾಂತೀ ಸುಖವನ್ನು|
ನಿನ್ನೀ ವೇಣಿಯ ಹಾಸುತ ಸರಿಸೇ |
ಮುಸುಕಿದ ಮಾಯೆಯ ತೆರೆಯನ್ನು |
ಜೀವನ ಸಾರ್ಥಕ ಪಡೆಯಲಿ ಅನುದಿನ |
ಕೊಂಡಾಡುತ ನಿನ್ನ ಮಹಿಮೆಯನು ||ಪಾಲಿಸೆ||

## ಶಾರದೆಯೇ ಕರಗಳ

ಶಾರದೆಯೇ ಕರಗಳ ಮುಗಿದೂ ।
ವಿನಯದಿ ನಡೆದೂ । ನಿರುತವು ನಿನ್ನಾ ಬೇಡುವೆವು ॥

ನಾಲಿಗೆಯಲಿ ನೆಲಸು ನನ್ನನಾವರಿಸು ।
ಆಡುವ ಮಾತೆಲ್ಲ ನಿನ್ನದಾಗಿರಿಸೂ...।
ಅನವರತವು ನಿನ್ನ ಧ್ಯಾನದೊಳಿರಿಸು ।
ನಿನ್ನವಳಾಗಿಸು ಬಾರೇ... ಬಾ ಶಾರದೆಯೇ ॥ಶಾರ

ಪ್ರೇಮದ ಕಣ್ಣನು ತೆರೆಯುತ ಕಾಯೇ ।
ದೀನಳ ಮೊರೆಯ ಆಲಿಸು ತಾಯೇ ।
ಅಜ್ಞಾನದಿ ಪರಿತಪಿಸುತಲಿರುವ।
ಪಾಮರರುದ್ಧರಿಸು ಬಾರೇ... ಬಾ ಶಾರದೆಯೇ ॥ಶಾರ

ನಾನೆಂಬ ಭ್ರಮೆಯೊಳು ಸಿಲುಕಿಹೆ ತಾಯೆ।
ನೀನಾರೆಂಬುದ ಅರಿಯೆನು ಮಾಯೆ ।
ಜನ್ಮಾಂತರದಿಂ ಕವಿದ ಅಜ್ಞಾನದ
ಬೇಗೆಯ ದಹಿಸುತ ಬಾರೇ.. ಬಾ ಶಾರದೆಯೇ
॥ಶಾರದೆಯೇ॥

## ಕಾಯೆ ಪನ್ನಗವೇಣಿ

ಕಾಯೆ ಪನ್ನಗ ವೇಣಿ। ಮಾತೆ ಬ್ರಹ್ಮನ ರಾಣಿ ।
ಆಲಿಸು ಮೊರೆಯಾ... ಮಾತೆ ಶಾರದೆ ನೀ ॥ಕಾಯ

ಸರಸಿಜ ನಾಭನ ಸೋದರಿ ವಾಣಿ।
ವಾಗ್‌ಪ್ರದಾಯಿನಿ ಜಿಹ್ವ ವಿಲಾಸಿನಿ ।
ಮಂಜುಳ ಭಾಷಿಣಿ । ಮಧುರ ಸುನಾದಿನಿ ।
ಓಂ ಕಾರಾ ಪ್ರಿಯೆ ಮತಿ ಗತಿ ದಾಯಿನಿ ॥ಕಾಯ

ದಂಡ ಕಮಂಡಲ ಪುಸ್ತಕ ಧಾರಿಣಿ |
ಚತುರ್ಮುಖ ಬ್ರಹ್ಮನ ಕಾರ್ಯ ಪ್ರಚೋದಿನಿ |
ವೇದಾಖಿಲ ಶಾಸ್ತ್ರ ಆಗಮ ಪೋಷಿಣಿ |
ವಿದ್ಯಾಧರೆ ವಾಗೀಶ್ವರಿ ವಾಣೀ... ||ಕಾ

ಲಲಿತ ಕಲಾ ಕವಿ ಕಾವ್ಯ ಪ್ರಕಾಶಿನಿ |
ಕಾಮಿತ ವರ ಪ್ರದೆ ಗೀರ್ವಾಣಿ |
ಜಾಗ್ರತ್ ಸ್ವಪ್ನ ಸುಷುಪ್ತಿ ವಿಹಾರಿಣಿ |
ಯೋಗ ಮಾಯೆ ಮಹ ಕುಂಡಲಿನೀ ||ಕಾ

ವಿದ್ಯಾವರ್ಷಿಣಿ | ಚಿತ್ತಾಕರ್ಷಿಣಿ|
ಅವಿರತ ಹರ್ಷಿಣಿ ಶರ್ವಾಣಿ |
ಯಂತ್ರ ಮಂತ್ರ ಮಹತಂತ್ರ ವಿಶಾರದೆ |
ಶ್ರೀ ಚಕ್ರೇಶ್ವರಿ ಬ್ರಹ್ಮಾಣಿ ||
||ಕಾಯೆ ಪನ್ನಗ ವೇಣಿ||

## ಹರಸಮ್ಮ ತಾಯೆ

ಹರಸಮ್ಮ ತಾಯೆ | ಮುನಿಸೇಕೆ ಮಾಯೇ
ದಯತೋರು ಎನ್ನಲ್ಲಿ ಶಾರದಾಂಬೆಯೇ|
ಶಾರದೇ.. ಅಮ್ಮಾ ಶಾರದೇ | ಶಾರದೇ...ದೇವೀ ಶಾರದೇ ||ಪ||

ಕರುಣಾಳು ನೀನೆಂದು | ಜಗವೆಲ್ಲ ಕೂಗುತಿದೆ |
ವರದೇವಿ ನೀನೆಂದು | ವೇದಗಳು ಹೊಗಳುತಿದೆ|

ಕರುಣೆತೋರಮ್ಮ| ಎನ್ನಲಿ ಮುನಿಸು ಬೇಡಮ್ಮ|
ಶಾರದೇ... ಅಮ್ಮಾಶಾರದೇ| ಶಾರದೇ... ದೇವೀ ಶಾರದೆ ||ಹ

ನೀ ವೀಣೆ ನುಡಿಸಿರಲು | ಶೃತಿರಾಗ ಹೊಮ್ಮಿರಲು |
ಅಜ ಸೃಷ್ಟಿಗೈದಿಹನು ಈ ಜಗವಾ ....|
ಅನುರಾಗದೀ ನೋಡುತಲಿ ಸಿರಿಮೊಗವಾ... |

ನಿನ್ನಾ ಸಿರಿಮೊಗವಾ ...||

ಶಾರದೇ.. ಅಮ್ಮಾ ಶಾರದೇ| ಶಾರದೇ ದೇವೀ... ಶಾರದೆ ||ಹರಸಮ್ಮ||

||ಹರಸಮ್ಮ ತಾಯೆ||



## ಮಧುರಾಪುರ ವಾಸಿನಿ

ಮಧುರಾಪುರ ವಾಸಿನೀ ಮೀನಾಕ್ಷಿ
ಮೃದು ಮಧು ಭಾಷಿಣಿ ವಿಶ್ವ ಕಲ್ಯಾಣೀ |
ಸುಂದರೇಶನ ಪ್ರಿಯ ಸತೀ...
ಶ್ರೀಹರಿ ಸೋದರಿ ಪಾರ್ವತೀ... ||ಮಧುರಾ||

ಕಾಂಚೀಪುರ ವಾಸಿನೀ ಕಾಮಾಕ್ಷಿ
ದುರಿತ ನಿವಾರಿಣಿ ದುರ್ಮದ ನಾಶಿನಿ |
ಕಾಮೇಶನರ್ಧಾಂಗೀ... ಗುಣವತೀ |
ಕಾಮಿತ ವರದೇ... ಪಾರ್ವತೀ ||ಮಧುರಾ||

ಕಾಶೀಪುರ ವಾಸಿನೀ ವಿಶಾಲಾಕ್ಷಿ |
ವಾಂಛಿತ ದಾಯಿನಿ ಕಲಿಮಲಹಾರಿಣೀ |
ವಿಶ್ವನಾಥನಾ... ಪ್ರಿಯಸತೀ.. |
ಅನ್ನಪೂರ್ಣೇಶ್ವರಿ... ಪಾರ್ವತೀ... ||ಮಧುರಾ||

||ಮಧುರಾಪುರ ವಾಸಿನೀ...||



## ಅಂಬ ಮೀನಾಕ್ಷಿ

ಅಂಬ ಮೀನಾಕ್ಷೀ । ಅಂಬ ಮೀನಾಕ್ಷೀ...।
ಒಲಿಯೋ... ನಲಿಯೋ ಅಂಬ ಮೀನಾಕ್ಷೀ...
ಪಾಪನಾಶಿನೀ ಪರಮದಯಾಳು। ಮೀನಾಕ್ಷಿ..। ಅಂಬ ಮೀನಾಕ್ಷಿ॥

ಆಲಯದೊಳು ನಿವಾಸಿನಿ । ಸುಹಾಸಿನಿ । ಸುಮೋದಿನಿ।
ಮಂದರಮಣಿ । ಸುಂದರಗಣಿ। ಚಂದಿರ ವದನಾಮೃತದರಗಿಣಿ।
ಮೀನಾಕ್ಷಿ... ಅಂಬ ಮೀನಾಕ್ಷಿ...।
ಹೃದಯೋ ... ಸದಯೋ... ಅಂಬ ಮೀನಾಕ್ಷಿ ॥

ಸುಂದರೇಶ ಪ್ರಿಯ ಭಾಮಿನಿ । ಮಧುಮಾಲಿನಿ । ಮಹಿಪಾಲಿನಿ ।
ಮಂಜುಳ ದನಿ । ಮಂಗಳ ಖನಿ। ಸರ್ವಮಂಗಳೆ ವರಪ್ರದಾಯಿನಿ।
ಮೀನಾಕ್ಷೀ ...ಅಂಬ ಮೀನಾಕ್ಷೀ....
ಒಲಿಯೋ... ನಲಿಯೋ.....ಅಂಬ ಮೀನಾಕ್ಷೀ॥



## ಎಲ್ಲಿ ಹುಡುಕಲಿ ನಿನ್ನ

ಎಲ್ಲಿ ಹುಡುಕಲಿ ನಿನ್ನಶ್ರೀ ವಲ್ಲಭನ ರಾಣೀ ।
ಎಲ್ಲೆಲ್ಲಿ ಹುಡುಕಿದರು ಸಿಗಲಿಲ್ಲವಿನ್ನೂ ॥

ಝಣ ಝಣ ಕಾಲ್ಗೆಜ್ಜೆ ಶಬ್ದ ಕೇಳುವ ತವಕ ।
ಕಿಣಿ ಕಿಣಿ ಅಂದುಗೆ ನಾದ ಆಲಿಸೊ ತವಕ ।
ಕಣಿ ಕಣಿ ಕೈಬಳೆ ರತುನ ಕಡಗದ ಬೆಳಕ ।
ಹಂಸ ಗಮನದ ನಡೆಯು ನೋಡುವಾ ತವಕ ॥ಎಲ್ಲಿ॥

ಲೋಕ ಬೆಳಗಿಹ ನಿನ್ನ ವದನ ಕಾಂತಿಯು ಬೆಳಕ |
ತಾಪ ನೀಗುವ ನಿನ್ನ ಸ್ಪರ್ಶ ಮಾಡುವ ತವಕ |
ವಿಶ್ವ ವಂದಿತೆ ನಿನ್ನ ಚರಣ ಕಾಣುವ ತನಕ |
ಮನವು ತಪಿಸುತಲಿಹುದೆ ನೀ ಒಲಿಯುವತನಕ ||ಎಲ್ಲಿ||

ಕ್ಷೀರ ಸಾಗರದಲ್ಲಿ ಅವಿತು ಕೊಂಡಿಹೆ ಏನೇ |
ಶ್ರೀಹರಿಯು ಹೃದಯದಿ ಬೆಚ್ಚಗಡಗಿಹೆ ಏನೇ|
ಕೊಲ್ಲಾಪುರದೆ ಕುಳಿತು ಪೂಜೆಗೇ ಮೈಮರೆತು |
ಇಲ್ಲಿ ಬಾರದೆ ನಮ್ಮ ಮರೆತಿಹೇ ಏನೇ ||ಎಲ್ಲಿ||

ಕಬ್ಬಿಣ ಕತಾರಿಯಲ್ಲಿ ಕೂಡಿ ಕಾಯ್ದಿಹರೇನೆ ||
ಅಷ್ಟ ದಿಗ್ ಬಂಧನವ ಮಾಡಿ ತಡೆದಿಹರೇನೆ |
ದುಷ್ಟರು ಜೂಜಾಟದಿಂದ ದಣಿಸುವರೆಂಬ |
ಕಷ್ಟದೀ ಕಾಣದೇ ಅವಿತು ಕೊಂಡಿಹೆ ಏನೇ?

||ಎಲ್ಲಿ ಹುಡುಕಲೆ ನಿನ್ನ ವಲ್ಲಭನ ರಾಣೀ
ಎಲ್ಲೆಲ್ಲಿ ಹುಡುಕಿದರೂ ಸಿಗಲಿಲ್ಲವಿನ್ನೂ||

## ಜಯ ಜಯ ಭಗವತಿ ನಾರಾಯಣಿ

ಜಯ ಜಯ ಭಗವತಿ ನಾರಾಯಣಿ |
ಕಾಪಾಡು ನಮ್ಮನ್ನು ಕಾತ್ಯಾಯನಿ |
ಏಳುಕೊಳ್ಳದ ತಾಯಿ ಎಲ್ಲಮ್ಮ ನೀ |
ಎಲ್ಲರ ಕಾಯುವ ಮಹದೇವಿ ನೀ ||ಜಯ||

ವಿದ್ಯ ಬುದ್ಧಿಯು ಕೊಡೊ ಸರಸ್ವತಿ ನೀ |
ಶೃಂಗೇರಿ ಪುರದಾ ಶಾರದೆ ನೀ |
ಕೊಲ್ಲೂರ ಸಿರಿದೇವಿ ಮೂಕಾಂಬೆ ನೀ |
ಭಕ್ತರ ಬಾಳಿನ ಸಂಜೀವಿನೀ... ||ಜಯ||

ಊರಕಾಯುವ ಗ್ರಾಮ ದೇವತೆ ನೀ ।
ಮಹರೋಗವ ಕಳೆಯುವ ಅಣ್ಣಮ್ಮ ನೀ ।
ಅನ್ನವಸ್ತ್ರವ ನೀಡೊ ಮಾತೆಯು ನೀ ।
ಹೊರನಾಡ ಅನ್ನಪೂರ್ಣೇಶ್ವರಿ ನೀ ॥ಜಯ॥

## ಓಂ ನಮೋ ನಾರಾಯಣೀ

ಓಂ ನಮೋ ನಾರಾಯಣೀ । ಓಂ ನಮೋ ಕಾತ್ಯಾಯಿನೀ ।
ಕರುಣಾಕರಿಯೇ ಶಿವಶಂಕರಿಯೇ ।
ಪರಿ ಪಾಲಿಸು ಅಂಬಿಕೆಯೇ...। ಓಂ ನಮೋ ನಾರಾಯಣೀ ॥ಪ॥

ಪರಿತಾಪಗಳಾ । ಮನದುಗುಡಗಳಾ। ಪರಿಹರಿಸೇ ಶರ್ವಾಣಿ।
ನೀನೊಲಿಯದಿರೆ । ಸುಖವೆಲ್ಲಿಹುದು। ಪರಿಪಾಲಿಸೆ ಜಗಜ್ಜನನೀ।
ನಿನ್ನ ಬೇಡುವೆ ಕಲ್ಯಾಣೀ। ಶಾರದೆಯೇ ಶುಕವಾಣಿ ॥ಓಂ

ನಿನ್ನ ನಂಬಿರಲು ಝಂಜಾಟಗಳು। ಹರಿದೋಡುವವೂ ತಾಯೆ।
ನಿನ್ನ ನಾಮದಲಿ ಮನ ಕುಣಿಯುತಲಿ। ಕಳೆದಿಹುದು ಮಹಮಾಯೆ ।
ನಿನ್ನ ಬೇಡುವೆ ಕಲ್ಯಾಣೀ। ಪಾರ್ವತಿಯೇ ಜಗಜ್ಜನನೀ ॥ಓಂ

ಮಮಕಾರಗಳು ಭವಮೋಹಗಳು। ಬಹು ಬಾಧಿಸುತಿಹುದೆನ್ನ।
ಓಂಕಾರದೊಳು ಸ್ಥಿರ ಚಿತ್ತದೊಳು। ನೆಲೆಯಾಗಿಸು ಮನವನ್ನ॥
ನಿನ್ನ ಬೇಡುವೆ ಕಲ್ಯಾಣೀ। ಪರಿಪಾಲಿಸು ಜಗಜ್ಜನನೀ ॥ಓ

ಜಗದಂಬಿಕೆಯೇ । ನೀನೇಗತಿಯೇ । ಪರಿಪಾಹಿ ಮೂಕಾಂಬಿಕೆಯೇ।
ನಿನ್ನ ನಂಬಿರಲು ಭಯವೆಲ್ಲಿಹುದೂ । ಬಾತಾಯೆ ಮಾಹೇಶ್ವರಿಯೇ ॥
ನಿನ್ನ ಬೇಡುವೆ ಕಲ್ಯಾಣೀ । ಪರಿಪಾಲಿಸು ಜಗಜ್ಜನನೀ॥

ಓಂ ನಮೋ ನಾರಾಯಣೀ ।ಓಂ ನಮೋ ಕಾತ್ಯಾಯಿನೀ ।
ಕರುಣಾಕರಿಯೇ। ಶಿವ ಶಂಕರಿಯೇ।
ಪರಿಪಾಲಿಸು ಅಂಬಿಕೆಯೇ। ಜಗಜ್ಜನನಿ ಮೂಕಾಂಬಿಕೆಯೇ॥
॥ಓಂ ನಮೋ ನಾರಾಯಣೀ॥

# ಜೈ ಭವಾನಿ-ಜೈ ಭವಾನಿ

ಜೈ ಭವಾನಿ ಜೈಭವಾನಿ । ಜೈ ಜೈ ಭವಾನಿ
ಜೈ ಜೈ ಭವಾನಿ । ಜೈ ಜೈ ಕಲ್ಯಾಣಿ ||ಜೈ||

ಅನ್ನದಾತೆ । ವಿದ್ಯದಾತೆ । ಜೈ ಜೈ ಭವಾನಿ ।
ಒಲಿದು ಬಾರೆ ಹರುಷತಾರೆ । ಅಂಬಾ ಭವಾನಿ ||ಜೈ||

ಆದಿಶಕ್ತಿ । ಪರಾಶಕ್ತಿ । ಜೈ ಜೈ ಭವಾನಿ ।
ತಾಯಿತಂದೆ ಬಂಧು ಬಳಗ । ತುಳಜಾಭವಾನಿ ||ಜೈ||

ದುರ್ಗಾಮಾತೆ ಅಷ್ಟಲಕ್ಷ್ಮಿ। ಜೈ ಜೈ ಭವಾನಿ ।
ಕಷ್ಟ ಕಳೆದು ನಮ್ಮ ಸಲಹು । ವಿಶ್ವ ಕಲ್ಯಾಣಿ ||ಜೈ||

ಬ್ರಹ್ಮ ವಿಷ್ಣು ಶಿವ ನೀನೇ। ಜೈ ಜೈ ಭವಾನಿ।
ವಾಣಿ ಲಕ್ಷ್ಮಿ ಪಾರ್ವತಿಯೆ । ಮಾತೇ ಭವಾನಿ ||ಜೈ||

ಜೈ ಜೈ ಭವಾನಿ। ಜೈ ಜೈ ಕಲ್ಯಾಣೀ।
ಜೈ ಭವಾನಿ ಜೈ ಭವಾನಿ ಜೈ ಜೈ ಭವಾನಿ।

ಅಂಬಾ ಭವಾನಿ । ತುಳಜಾ ಭವಾನಿ।
ಗಂಗಾ ಭವಾನಿ । ವಿಶ್ವ ಕಲ್ಯಾಣಿ ||ಜೈ||

# ಅಂಬಾ ಭವಾನಿ

ಅಂಬ ಭವಾನಿ। ಅಖಿಲಾಂಡ ಜನನೀ। ಆದಿ ಪರಾಶಕ್ತಿ ಓಂಕಾರೀ...।
ಹೇ ಕಲ್ಯಾಣೀ। ವಿಶ್ವಮೋಹಿನೀ। ಪಾಹಿ ಪಾಹಿ ನಮೋ..... ಜಗಜ್ಜನನೀ||ಪ||

ನಿನ್ನೀಸುಂದರ ವದನ ಮನೋಹರ।
ವರ್ಣಿಸಲಸದಳ ಮಹಿಮೆ ಅಪಾರ||

ಕಾಯ ವಾಚ ಮನ ಪಾದನಿರಂತರ ಭೃಂಗ ಸಂಗ ನಿರತ।
ನೀಡೆ ತಾಯೆ ಮದನಾಂತಕಾಯೆ ನಿನ್ನಧ್ಯಾನವಿರಿಸೆ ಸತತ|| ||ಅಂಬ

ನಿನ್ನವಿಲಾಸದ ವೈಭವ ಜಗದೊಳು। ಅಡಗಿದೆ ನಿನ್ನಯ ಲೀಲೆಗಳು।
ನನ್ನೀ ದೇಹದ ಅಣುಅಣು ತುಂಬಲಿ। ನಿನ್ನೀ ಚೇತನ ಶಕ್ತಿಗಳು।

ನನ್ನ ಕಂಗಳಲಿ ಚಿಮ್ಮಿಬೆಳಗಲೀ ನಿನ್ನ ದಿವ್ಯರೂಪಾ।
ಗುಪ್ತ ಕುಂಡಲಿನಿ ಚಕ್ರಭೇದಿಸಲಿ ನಿನ್ನ ಮಾಯಧೂಪಾ॥
॥ಅಂಬಭವಾನಿ। ಅಖಿಲಾಂಡ ಜನನಿ॥

## ಸಾವಿರಾನೆ ಬಲವುಂಟು

ಸಾವಿರಾನೆ ಬಲವುಂಟು ನಿನ್ನ ನಾಮದಿ।
ಸತ್ಯಲೋಕ ಫಲವುಂಟು ನಿನ್ನ ಭಜನದಿ।
ಕಷ್ಟವೆಲ್ಲ ಓಡುವುದು ನಿನ್ನ ಸನಿಹದೀ।
ಶಾಶ್ವತದಾ ಮುಕ್ತಿಯುಂಟು ನಿನ್ನ ಧ್ಯಾನದೀ॥ಸಾವಿರಾನೆ॥

ಚಿತ್ತ ಶುದ್ಧಿಯಾಗುವುದು ಭಕ್ತಸಂಗದಿ।
ನಿವೃತ್ತಿ ಮಾರ್ಗ ಲಭಿಸುವುದು ನಿನ್ನ ಸ್ಮರಣದಿ।
ಮೃತ್ಯುಭಯುವು ಓಡುವುದು ನಿನ್ನ ಕರುಣದಿ।
ಆತ್ಮ ಜ್ಞಾನ ಲಭಿಸುವುದು ನಿನ್ನ ಚರಣದೀ॥
॥ಸಾವಿರಾನೆ ಬಲವುಂಟು॥

## ಅನಂತರೂಪಿಣಿ ಹೇ ಜಗದಂಬೇ

ಅನಂತರೂಪಿಣಿ ಹೇ ಜಗದಂಬೇ। ಅಮ್ಮಾ ... ಅಮ್ಮಾ...।
ಆನಂದದಾಯಿನಿ ಹೇ ಮೂಕಾಂಬೇ। ಅಮ್ಮಾ ... ಅಮ್ಮಾ ...।
ಇಷ್ಟಾರ್ಥಗಳ ನೀಡುವ ತಾಯೇ। ಅಮ್ಮಾ ... ಅಮ್ಮಾ...।
ತನುಮನವೆಲ್ಲಾ ನಿನ್ನಯ ಪಾದಕೆ। ಅಮ್ಮಾ ... ಅಮ್ಮಾ...।
ಅಮ್ಮಾ ... ಅಮ್ಮಾ ... ಅಮ್ಮಾ ... ಅಮ್ಮಾ ... ॥

ಮಧುಕೈಟಭರ ಮದವಡಗಿಸಿದ। ಅಮ್ಮಾ ... ಅಮ್ಮಾ...।
ಮಂಗಳ ಮೂರುತಿ ವೈಷ್ಣವಿ ಮಾತಾ। ಅಮ್ಮಾ ... ಅಮ್ಮಾ...।

ಅಮ್ಮಾ ... ಅಮ್ಮಾ... ವೈಷ್ಣವಿಯಮ್ಮಾ ....

ಮಹಿಷಾಸುರನ ಸೊಕ್ಕಡಿಗಿಸಿದ| ಅಮ್ಮಾ ... ಅಮ್ಮಾ...|
ಮಹಿಷಮರ್ದಿನಿ ಹೇ ಜಗನ್ಮಾತ| ಅಮ್ಮಾ ... ಅಮ್ಮಾ...|
ಅಮ್ಮಾ ... ಅಮ್ಮಾ... ಚಾಮುಂಡಿಯಮ್ಮ ||ಅನಂತ|

ಚಂಡ-ಮುಂಡರ ರುಂಡ ಖಂಡಿಸಿದ| ಅಮ್ಮಾ ... ಅಮ್ಮಾ...|
ಚಾಮುಂಡೇಶ್ವರಿ ಹೇ ಜಗನ್ಮಾತಾ| ಅಮ್ಮಾ ... ಅಮ್ಮಾ...|
ಅಮ್ಮಾ ... ಅಮ್ಮಾ... ಚಂಡಿಕಾಮ್ಮ

ಶುಂಭ-ನಿಶುಂಭರ ಸಮರದಿ ಕೆಡಹಿದ | ಅಮ್ಮಾ ... ಅಮ್ಮಾ...|
ಶಾಂಭವಿ ಎಂಬುವ ನಾಮದಿ ಮೆರೆದ| ಅಮ್ಮಾ ... ಅಮ್ಮಾ...|
ಅಮ್ಮಾ ... ಅಮ್ಮಾ.. ಶಾಂಭವಿಯಮ್ಮ ||ಅನಂತ|

ದುರ್ಗಾಸುರನ ದರ್ಪವನಳಿಸಿದ| ಅಮ್ಮಾ ... ಅಮ್ಮಾ...
ದುರ್ಗಾದೇವಿ ಹೇ ಶುಭದಾತೆ| ಅಮ್ಮಾ ... ಅಮ್ಮಾ...
ಅಮ್ಮಾ ... ಅಮ್ಮಾ ... ದುರ್ಗಾಮ್ಮ

ರಕ್ತಬೀಜನ ರಕ್ತಹೀರಿದ | ಅಮ್ಮಾ ... ಅಮ್ಮಾ...
ಕಾಳಿಯಾಗಿ ರಣರಂಗದಿ ಮೆರೆದಾ| ಅಮ್ಮಾ ... ಅಮ್ಮಾ...
ಅಮ್ಮಾ .. ಅಮ್ಮಾ... ಮಹಕಾಳಿಯಮ್ಮ ||ಅನಂತ|

ಹೂಂಕರಿಸುತಲಿ ಧೂಮ್ರನ ದಹಿಸಿದ | ಅಮ್ಮಾ .. ಅಮ್ಮಾ... |
ಧೂಮ್ರಲೋಚನೆ ಹೇ ಮಹ ಮಾರೀ| ಅಮ್ಮಾ .. ಅಮ್ಮಾ... |
ಅಮ್ಮಾ .. ಅಮ್ಮಾ... ಮಹಮಾರಿಯಮ್ಮ

ಭ್ರಮರಾಸುರನ ಸಮರದಿ ಕುಟ್ಟಿದ| ಅಮ್ಮಾ .. ಅಮ್ಮಾ... |
ಭ್ರಮರಾಂಬಿಕೆಯೇ ಹೇ ಜಗನ್ಮಾತೆ| ಅಮ್ಮಾ .. ಅಮ್ಮಾ... |
ಅಮ್ಮಾ .. ಅಮ್ಮಾ... ಭ್ರಮರಾಂಬಿಕಾಮ್ಮ|| ||ಅನಂತ|

ರಸಿಲೋಮ ರುದಗ್ರರ ಶಿರಭೇದಿಸಿದ| ಅಮ್ಮಾ .. ಅಮ್ಮಾ... |
ರಾಜ ರಾಜೇಶ್ವರಿ ಹೇ ಜಗನ್ಮಾತೆ| ಅಮ್ಮಾ .. ಅಮ್ಮಾ... |
ಅಮ್ಮಾ .. ಅಮ್ಮಾ... ರಾಜೇಶ್ವರಿಯಮ್ಮ

ಮೂಕಾಸುರನ ದರ್ಪವ ನಳಿಸಿದ| ಅಮ್ಮಾ .. ಅಮ್ಮಾ... |
ಮೂಕಾಂಬಿಕೆ ಎಂಬ ನಾಮದಿ ಮೆರೆದ| ಅಮ್ಮಾ .. ಅಮ್ಮಾ... |
ಅಮ್ಮಾ .. ಅಮ್ಮಾ... ಮೂಕಾಂಬೆಯಮ್ಮ ||ಅನಂತ||

ದುಷ್ಟರನಳಿಸಲು ನೀ ಅವತರಿಸುವೆ| ಅಮ್ಮಾ .. ಅಮ್ಮಾ... |
ಲೋಕ ಕಂಟಕವ ನೀಗಿ ಕಾಯುವ ಜಗನ್ಮಾತೆಯಮ್ಮ| ||ಅನಂತ||
||ಅಮ್ಮಾ .. ಅಮ್ಮಾ... ಜಗನ್ಮಾತೆಯಮ್ಮಾ||

## ಪಾಹಿ ಪಾಹಿ ತವಶರಣಂ

ಪಾಹಿ ಪಾಹಿ ತವಶರಣಂ| ಪಾಹಿ ಮೂಕಾಂಬೆ ತವಶರಣಂ
ದೇಹಿ ದೇಹಿ ತವಶರಣಂ| ದೇಹಿ ಮೂಕಾಂಬೆ ತವಶರಣಂ||

ಆದಿಶಕ್ತಿಯೇ ತವಶರಣಂ| ಆನಂದದಾಯಿನಿ ತವಶರಣಂ
ಆಗಮಚರಿತೇ ತವಶರಣಂ| ಅಜಸುರ ವಂದಿತೆ ತವಶರಣಂ
ವೇದಾಂತವೇದ್ಯೇ ತವಶರಣಂ| ವೇದೋದ್ಧಾರಿಣಿ ತವಶರಣಂ||
||ಪಾಹಿ ಪಾಹಿ||

ಭಕ್ತ ವತ್ಸಲೇ ತವಶರಣಂ| ಭಕ್ತೋದ್ಧಾರಿಣಿ ತವಶರಣಂ
ಭವಭಯನಾಶಿನಿ ತವಶರಣಂ| ಭವರೋಗ ಹಾರಿಣಿ ತವಶರಣಂ
ಜ್ಞಾನರೂಪಳೇ ತವಶರಣಂ| ಜ್ಞಾನಪ್ರಕಾಶಿತೆ ತವಶರಣಂ||
||ಪಾಹಿಪಾಹಿ||

ಸಿದ್ಧಿದೇವತೆಯೆ ತವಶರಣಂ| ಸಿದ್ಧರ ಸಿದ್ಧಳೆ ತವಶರಣಂ
ಪುರುಷಪ್ರಕೃತಿಯೇ ತವಶರಣಂ| ಪಾಪ ನಾಶಿನಿ ತವಶರಣಂ
ಸಿಂಹಾರೂಢೇ ತವಶರಣಂ| ಸತ್ಯಸ್ವರೂಪಳೆ ತವಶರಣಂ||
||ಪಾಹಿಪಾಹಿ||

ಮಾಯಾರೂಪಳೇ ತವಶರಣಂ| ಮಾಯಾರಹಿತಳೇ ತವಶರಣಂ
ಗುಪ್ತಗಾಮಿನಿಯೆ ತವಶರಣಂ| ಸುಪ್ತಸ್ವರೂಪಳೇ ತವಶರಣಂ
ಗುರುವರ ಸೇವಿತೆ ತವಶರಣಂ| ಶ್ರೀಚಕ್ರವಾಸಿತೇ ತವಶರಣಂ||
||ಪಾಹಿ ಪಾಹಿ||

ಜ್ಯೋತಿಸ್ವರೂಪಳೇ ತವಶರಣಂ। ಜ್ಯೋತಿರ್ಲಿಂಗಳೇ ತವಶರಣಂ
ಮೂಕಾಸುರ ಮರ್ದಿನಿ ತವಶರಣಂ। ಮೂಕಾಂಬಿಕೆಯೇ ತವಶರಣಂ
ತ್ರಿಮೂರ್ತಿರೂಪಿಣಿ ತವಶರಣಂ। ತ್ರಿಭುವನಮೋಹಿನಿ ತವಶರಣಂ॥
॥ಪಾಹಿ ಪಾಹಿ।

ತ್ರಿನೇತ್ರ ಧಾರಿಣಿ ತವಶರಣಂ। ತ್ರಿಭುವನ ಪೋಷಿತೆ ತವಶರಣಂ
ರಾಜರಾಜೇಶ್ವರಿ ತವಶರಣಂ। ರಾಜೀವಲೋಚನೆ ತವಶರಣಂ
ಅನ್ನಪೂರ್ಣೇಶ್ವರಿ ತವಶರಣಂ। ಆಶ್ರಿತ ರಕ್ಷಕಿ ತವಶರಣಂ॥
॥ಪಾಹಿಪಾಹಿ।

ಜಯಮಹಕಾಳೀ ತವಶರಣಂ। ಜಯ ಮಹಲಕ್ಷ್ಮಿ ತವಶರಣಂ
ಜಯ ಮಹಸರಸ್ವತಿ ತವಶರಣಂ। ಸರ್ವಮಂಗಳೆಯೇ ತವಶರಣಂ
ಜಯ ಜಯ ಅಂಬಿಕೆ ತವಶರಣಂ। ಜಯ ಮೂಕಾಂಬಿಕೆ ತವಶರಣಂ॥
॥ಪಾಹಿಪಾಹಿ।

ಪಾಹಿ ಪಾಹಿ ತವಶರಣಂ। ಪಾಹಿ ಮೂಕಾಂಬೇತವಶರಣಂ॥

## ಕೊಲ್ಲೂರ ಮೂಕಾಂಬಿಕೆ

ಕೊಲ್ಲೂರ ಮೂಕಾಂಬಿಕೆ ತಾಯೆ। ನೀನಮ್ಮ ಜಗದಂಬಿಕೆ
ಕಾಯಲು ನೀನಿರಲು। ಕಾವಲು ನನಗೇಕೆ।
ಕಾಲನ ಭಯವೇತಕೆ। ತಾಯೆ ಕಾವಲು ಇನ್ನೇತಕೆ॥ಪ॥

ನಿನ್ನಾಣತಿಯಲಿ ಈ ಜಗ ನಡೆವುದು। ಯಾರಿಂದೇನಿಹುದು।
ನಿನ್ನಯ ಲೀಲೆಯ ಮರೆತರೆ ಬಾಳಲಿ ಸುಖವಿನ್ನೆಲ್ಲಿಹುದು।
ತಾಯೇ ಸುಖವಿನ್ನೆಲಿಹುದು ॥ಕೊಲ್ಲೂರ॥

ಬ್ರಹ್ಮಾದಿಗಳೆ ನಿನ್ನನ್ನು ಸ್ತುತಿಪರು ಆದಿಶಕ್ತಿಯು ನೀನೆಂದು।
ಲೋಕೋದ್ಧಾರಿಣೀ ಪತಿತ ಪಾವನೆ। ಸರ್ವಮಂಗಳೇ ಕಾಯೆಂದು॥ ॥ಕೊಲ್ಲೂರ॥

ದುಷ್ಟದಾನವರೆಲ್ಲ ನಡುಗುತ ಬಂದು।
ಶರಣಾಗಬೇಕಮ್ಮ ನಿನ್ನಡಿಗಿಂದು।

ಲೋಕನಾಶವ ಗೈವ ದ್ವೇಷವು ಇಂದು|
ಸೆರೆಗೊಡ್ಡಿ ಬೇಡುವೆನು ಕೊನೆಗಾಣಲೆಂದು ||ಕೊಲ್ಲೂರ||

ಮೂಕಾಸುರ ಜಿಹ್ವಾ ಬಂಧಿನಿ| ಸಂಹಾರಿಣಿಕಾರಿಣಿ ಜಗದಂಬಾ|
ಲೋಕನಾಯಕಿ ದುಷ್ಟಹಾರಿಣಿ| ಸರ್ವಮಂಗಳೆ ಮೂಕಾಂಬಾ|
ಕೋಲಮಹರ್ಷಿವರಪ್ರದೆ ಅಂಬಿಕೆ| ಕೋಲಾಹಲ ಭಯ ಹಾರಿಣಿ|
ಹರ್ಷಿತೆ ವರ್ಷಿತೆ ಕಲಿಯುಗ ದರ್ಶಿತೆ|
ಭವ ಭಯ ಶೋಕ ನಿವಾರಿಣಿ ||ಕೊಲ್ಲೂರ||

## ಕರ್ಪೂರದಾರತಿ

ಕರ್ಪೂರದಾರತಿ ಮೂಕಾಂಬೆಯಮ್ಮ|
ನೀನು ಅರಿಶಿನ ಕುಂಕುಮ ಗೌರಿಯಮ್ಮ|
ಕರಿಮಣಿ ಬಿಚ್ಚೋಲೆ ತಂದೆ ನಮ್ಮ
ನಿನ್ನ ಸಿರಿ ಮುಡಿಗೆ ಹೂಮಾಲೆ ಇಟ್ಟೆನಮ್ಮ ||ಕರ್ಪೂರ||

ಶೃಂಗೇರಿ ಶಾರದೆಯು ನೀನಮ್ಮ|
ಭವದ ಭಂಗವನೆಲ್ಲವ ಬಿಡಿಸಮ್ಮ|
ಕೊಲ್ಲೂರ ಸಿರಿದೇವಿ ನೀನಮ್ಮ
ನಮ್ಮ ಕಷ್ಟಗಳೆಲ್ಲವ ಹರಿಸಮ್ಮ ||ಕರ್ಪೂರ||

ಹೊರನಾಡ ಅನ್ನಪೂರ್ಣೆ ನೀನಮ್ಮ|
ನಮ್ಮ ಪರಿಪರಿಯ ವೇದನೆಯ ಕಳೆಯಮ್ಮ|
ಕರಿಮಾರಿ ಕಾಳಿದೇವಿ ನೀನಮ್ಮ
ನಮ್ಮ ಕತ್ತಲ ಬಾಳನ್ನು ಬೆಳಗಮ್ಮ ||ಕರ್ಪೂರ||

ಮೀನಾಕ್ಷಿ ದೇವಿಯೆ ನೀನಮ್ಮ
ಈ ಮಾಯಾಪಾಶವ ಬಿಡಿಸಿ ಕಾಯಮ್ಮ|
ಕಾಶೀ ವಿಶಾಲಾಕ್ಷಿ ನೀನಮ್ಮ
ಎನ್ನ ಕಾಯಾ ಬೀಳುವ ಮುನ್ನ ಒಲಿಯಮ್ಮ ||ಕರ್ಪೂರ||

ಅಣ್ಣಮ್ಮ ದೇವಿಯು ನೀನಮ್ಮ
ಆರೋಗ್ಯ ಭಾಗ್ಯವ ನೀಡಮ್ಮ|
ಕಾಮಾಕ್ಷಿ ದೇವಿಯೆ ಹರಸಮ್ಮ
ಜಗಕೆ ಕ್ಷಾಮವು ಬರದಂತೆ ಕಾಯಮ್ಮ ||

ಮಂಗಳ ಗೌರಿಯು ನೀನಮ್ಮ|
ಅಮಂಗಳ ಬರದಂತೆ ಕಾಯಮ್ಮ|
ನಿನ್ನ ಕರುಣೆಯ ಕಡಲನ್ನು ಹರಿಸಮ್ಮ|
ನಮ್ಮ ಭಜನೆಗೆ ತಪ್ಪದೆ ಬಾರಮ್ಮಾ.... |

## ಎಲ್ಲಡಗಿರುವೆ ಬಾರಮ್ಮಾ

ಎಲ್ಲಡಗಿರುವೆ ಬಾರಮ್ಮ| ನಿನ್ನಯ ಮೊಗವ ತೋರಮ್ಮ|
ನಿನ್ನನು ಹೊರತು ಯಾರಮ್ಮ| ನಮ್ಮನು ಕಾಯಲು ಇಹರಮ್ಮ|
ಜೈ ಜೈ ಜಗದಂಬಾ| ಜೈ ಜೈ ಮೂಕಾಂಬಾ ||ಎ||

ಅಮ್ಮಾ ಎನ್ನುವ ಶಬ್ದದೊಳು| ಅಡಗಿದೆ ಬ್ರಹ್ಮನ ತತ್ವಗಳು|
ಅಳಿದರೆ ಮೋಹಾಂಕಾರಗಳು| ದೊರೆವುದು ಶಾಶ್ವತ ಮೋಕ್ಷಗ
ಜೈ ಜೈ ಜಗದಂಬಾ| ಜೈ ಜೈ ಮೂಕಾಂಬಾ||

ಪಾಮರ ನಾನು ಓ ಅಮ್ಮ| ಉದ್ಧರಿಸಲು ನೀ ಬಾರಮ್ಮ|
ನನ್ನವರೆಲ್ಲರು ಎನ್ನ ಕೈ ಬಿಟ್ಟರು| ನೀ ಕೈ ಬಿಡದಿರು ನನ್ನಮ್ಮಾ||
||ಜೈ ಜೈ ಜಗದಂಬಾ| ಜೈ ಜೈ ಮೂಕಾಂಬಾ||

ಬೇಕೆನ್ನುವಾಸೆ ಅಡಗಿಲ್ಲ| ಸಾಕೆನ್ನುವ ಪರಿ ತಿಳಿದಿಲ್ಲ|
ಬೇಕು ಸಾಕೆನ್ನುವ ಜಂಝಾಟದೊಳು| ಜೀವನ ವ್ಯರ್ಥವಾಗಿದೆ
ಜೈ ಜೈ ಜಗದಂಬಾ| ಜೈ ಜೈ| ಮೂಕಾಂಬಾ||

ಮೌನವು ಇನ್ನು ಸಾಕಮ್ಮ| ಶರಪಂಜರದಲಿ ಇಹೆನಮ್ಮ
ಭವ ಬಂಧನಗಳು ಕಿತ್ತು ತಿನ್ನುತಿರೆ| ಕರುಣೆ ಇನ್ನು ಏಕಿಲ್ಲಮ್ಮ|
ಜೈ ಜೈ ಜಗದಂಬಾ| ಜೈ ಜೈ ಮೂಕಾಂಬಾ||

ನಿನ್ನನು ಬಿಟ್ಟರೆ ಗತಿ ಇಲ್ಲ! ನಿನಗಿದು ತಿಳಿಯದೆ ಏನಿಲ್ಲ!
ಒಳಗೆ ಕುಳಿತು ಇದ ನೋಡುತಿಪೆ! ಆದರು ಸುಮ್ಮನೆ ಕಾಡುತಿಹೆ!!
ಜೈ ಜೈ ಜಗದಂಬಾ! ಜೈ ಜೈ ಮೂಕಾಂಬಾ!!

ಅಷ್ಟಲಕ್ಷ್ಮಿಯು ನೀನಾದೆ! ಆದರು ಸಿರಿಯ ಕೊಡದಾದೆ!
ಆದಿ ಶಕ್ತಿಯು ನೀನಾದೆ! ಭವಸಾಗರದಾಟಿಸದಾದೆ!
ಜ್ಞಾನ ಭಂಡಾರವೆ ನೀನಾದೆ! ಅಜ್ಞಾನದಿಂದ ಏಳಿಸದಾದೆ!
ಇನ್ನು ಏಕೆ ಗೋಳಾಡಿಸುವೇ! ಇದ್ದರು ನೀಡದೆ ಕಾಡಿರುವೆ!!
ಜೈ ಜೈ ಜಗದಂಬಾ! ಜೈ ಜೈ ಮೂಕಾಂಬಾ!!

ಎಲ್ಲರ ನೋವು ಅರಿತಿರುವೆ! ಎಲ್ಲಕು ಮದ್ದನು ತಿಳಿದಿರುವೇ!
ಎಲ್ಲರ ಬಳಿಯೂ ನೀನಿರುವೆ! ಅರಿವನು ನೀಡದೆ ಏಕಿರುವೆ !
ಜೈ ಜೈ ಜಗದಂಬಾ! ಜೈ ಜೈ ಮೂಕಾಂಬಾ!!

ಇನ್ನೆಷ್ಟು ಕೂಗಲೆ ನನ್ನಮ್ಮಾ! ಇನ್ನೆಂತು ಬೇಡಲಿ ಹೇಳಮ್ಮ!
ಇನ್ನಾದರು ಕಣ್ ತೆರೆಯುಮ್ಮ! ನಿನ್ನಯ ದರುಶನ ನೀಡಮ್ಮ!!
ಜೈ ಜೈ ಜಗದಂಬಾ! ಜೈ ಜೈ ಮೂಕಾಂಬಾ!!

## ನಿನ್ನ ಅನುಗ್ರಹವ

ನಿನ್ನ ಅನುಗ್ರಹವ ಬೇಡುವೆವು! ಮೂಕಾಂಬ ತಾಯೆ! ಮೂಕಾಂಬ ತಾಯೆ!
ನಿನ್ನ ಚರಣಕ್ಕೆ ಎರಗುವೆವು! ಮೂಕಾಂಬಾ ತಾಯೆ! ಮೂಕಾಂಬ ತಾಯೆ!
ನಿನಗೆ ಶಿರಬಾಗಿ ವಂದಿಸುವೆ! ಮೂಕಾಂಬಾ ತಾಯೆ! ಮೂಕಾಂಬ ತಾಯೆ!
ನಿನಗೆ ಶರಣಾಗಿ ನಮಿಸುವೆವು! ಮೂಕಾಂಬಾ ತಾಯೆ! ಮೂಕಾಂಬ ತಾಯೆ!
ನಿನಗೆ ಸೆರಗೊಡ್ಡಿ ಬೇಡುವೆವು! ಮೂಕಾಂಬಾ ತಾಯೆ! ಮೂಕಾಂಬ ತಾಯೆ!
ನಿನ್ನ ಅನುಗಾಲ ಸ್ಮರಿಸುವೆವು! ಮೂಕಾಂಬಾ ತಾಯೆ! ಮೂಕಾಂಬ ತಾಯೆ!
ನಮ್ಮ ಅಜ್ಞಾನ ಕಳೆಯುಮ್ಮ! ಮೂಕಾಂಬಾ ತಾಯೆ! ಮೂಕಾಂಬ ತಾಯೆ!
ನಮ್ಮ ಚಿತ್ತದೊಳು ನೆಲಸಮ್ಮ! ಮೂಕಾಂಬಾ ತಾಯೆ! ಮೂಕಾಂಬ ತಾಯೆ!
ನಮ್ಮ ಕಷ್ಟಗಳ ಹರಿಸಮ್ಮ! ಮೂಕಾಂಬಾ ತಾಯೆ! ಮೂಕಾಂಬ ತಾಯೆ!
ನಮ್ಮ ತಪ್ಪುಗಳ ಕ್ಷಮಿಸಮ್ಮ! ಮೂಕಾಂಬಾ ತಾಯೆ! ಮೂಕಾಂಬ ತಾಯೆ!

ನಮ್ಮ ಕೋರಿಕೆಯ ನಡೆಸಮ್ಮ| ಮೂಕಾಂಬಾ ತಾಯೆ| ಮೂಕಾಂಬ ತಾಯೆ|
ನಮ್ಮ ಹೃದಯದೊಳು ನೆಲಸಮ್ಮ| ಮೂಕಾಂಬಾ ತಾಯೆ| ಮೂಕಾಂಬ ತಾಯೆ|
ನಮಗೆ ಭಕ್ತಿಯನು ನೀಡಮ್ಮ| ಮೂಕಾಂಬಾ ತಾಯೆ| ಮೂಕಾಂಬ ತಾಯೆ|
ನಮಗೆ ಮುಕ್ತಿಯನು ಕರುಣಿಸಮ್ಮ| ಮೂಕಾಂಬಾ ತಾಯೆ| ಮೂಕಾಂಬ ತಾಯೆ|
ಜಗಕೆ ಶಾಂತಿಯನು ನೀಡಮ್ಮ| ಮೂಕಾಂಬಾ ತಾಯೆ| ಮೂಕಾಂಬ ತಾಯೆ|
ನಿನಗೆ ಆರತಿಯ ಬೆಳಗುವೆವು| ಮೂಕಾಂಬಾ ತಾಯೆ| ಮೂಕಾಂಬ ತಾಯೆ|

## ಪಾಹಿಮಾಂ ಜಗದಂಬಾ

ಪಾಹಿಮಾಂ ಜಗದಂಬಾ ಪಾಹಿಮಾಂ |
ದೇಹಿಮಾಂ ಜಗದಂಬಾ ದೇಹಿಮಾಂ |
ತ್ರಾಹಿಮಾಂ ಜಗದಂಬಾ ತ್ರಾಹಿಮಾಂ |
ರಕ್ಷಮಾಂ ಜಗದಂಬಾ ರಕ್ಷಮಾಂ ||ಪಾಹಿ||

ಅನವರತ ನಿನ್ನ ನಾಮ ಸ್ಮೃತಿಯಲ್ಲಿ ಮೊಳಗಲಿ |
ಮನವೆಂಬೊ ಮರ್ಕಟವು ನಿನ್ನಾಸರೆ ಹೊಂದಲಿ |
ಓಂಕಾರ ಹ್ರೀಂಕಾರ ಜಯ ಘೋಷ ಮೊಳಗಲಿ |
ಈ ಜೀವ ಈ ಭಾವ ನಿನ್ನಲೈಕ್ಯ ಹೊಂದಲಿ ||ಪಾಹಿ||

ಅಜ್ಞಾನ ಅವಿಚಾರ ಮನಬಿಟ್ಟು ತೊಲಗಲಿ |
ಅರಿವೆಂಬೊ ಐಶ್ವರ್ಯ ಮನತುಂಬಿ ಬೆಳಗಲಿ |
ಅದ್ವೈತ ಮಹತತ್ವ ಒಳಗಣ್ಣ ತೆರಸಲಿ |
ಮಹಯೋಗದಿಂ ಜೀವ ಅಮರತ್ವ ಹೊಂದಲಿ ||ಪಾಹಿ||

ವಾಣಿನೀ ಪಾಣಿನೀ.. ದೈತ್ಯ ಗರ್ವನಾಶಿನಿ |
ನಾದಿನೀ.. ಮೋದಿನೀ... ಸರ್ವರೋಗ ಹಾರಿಣಿ|
ಯೋಗಿನಿ ಭೋಗಿನೀ... ಸಕಲಕಾರ್ಯಕಾರಿಣಿ |
ದಂಡನೀ... ಮಂಡಿನೀ... ವಿಶ್ವಾಂಬರ ಧಾರಿಣಿ ||

||ಪಾಹಿಮಾಂ ಜಗದಂಬ||

## ದಯೆತೋರೆ ಇನ್ನು

ದಯೆ ತೋರೆ ಇನ್ನು ದೀನಳ ಮೇಲೆ ।
ಮಂಗಳದಾತೆ ಮೂಕಾಂಬಿಕೇ ... ||ದಯೆ||

ಜಗವನು ಪೀಡಿಪ ಮೂಕಾಸುರನ ।
ದಮನವ ಮಾಡಿದ ಪರಿಯಲ್ಲಿ ।
ಮನವನು ಪೀಡಿಪ ವಿಷಯಾಸುರನ ।
ಭಸ್ಮವ ಮಾಡೇ ಕ್ಷಣದಲ್ಲೀ ||ದಯೆ||

ಪರಮ ಪಾವನ ಗಂಗೆ ಸೌಪರ್ಣಿಕೆಯು ।
ಕೊಳೆಯನು ತೊಳೆವಾ ಪರಿಯಲ್ಲಿ ।
ಜನ್ಮಾಂತರದ ಕರ್ಮವ ಕಳೆಯೆ ।
ನಿನ್ನಯ ಕರುಣೆಯಾ ಹೊಳೆಯಲ್ಲೀ ||ದಯೆ||

ಕೊಡ ಚಾದ್ರಿಯ ಗಿರಿ ಸೌಗಂಧವ ಬೀರಿ ।
ರೋಗವ ಕಳೆವಾ ಪರಿಯಲ್ಲಿ ।
ಸಂಚಿತ ಪಾಪದ ಹೊರೆಯನು ಇಳಿಸೆ
ಜ್ಞಾನ ವೈರಾಗ್ಯದ ನೆರಳಲ್ಲೀ.. ||ದಯೆ||

## ಮನತುಂಬಿ ನಿಂತಿರುವ

ಮನತುಂಬಿ ನಿಂತಿರುವ । ಮನೆದೇವತೆ ।
ಮುನಿಬೇಡ ಎನಮೇಲೆ । ಮಹಿಮಾನ್ವಿತೇ ||ಪ||
|| ಓ ಅಂಬೇ ಜಗದಂಬೆ । ಓ ... ಅಂಬೇ.. ಮೂಕಾಂಬೆ||

ನಿನಗಾಗಿ ತಪಿಸಿದೆನು ಬಹು ಜನ್ಮವೂ।
ಕೊಡಲೇಕೆ ತಡವಿನ್ನು ದರುಶನವೂ ||
|| ಓ ಅಂಬೇ ಜಗದಂಬೆ । ಓ ... ಅಂಬೇ.. ಮೂಕಾಂಬೆ ||ಮನ||

ಮಾಯಾ ಸಮುದ್ರದಿ ಮುಳುಗಿಹೆನು |
ಜಗನ್ಮಾಯೆಯೆ ಶರಣು ಬಂದಿಹೆನು ||
|| ಓ ಅಂಬೇ ಜಗದಂಬೆ | ಓ ... ಅಂಬೇ..ಮೂಕಾಂಬೆ ||ಮನ

ಬಹು ಗರ್ಭಗಳ ಪೊಕ್ಕು ಬಳಲಿಹೆನು |
ಮತ್ತೆ ಮರು ಜನುಮ ಬೇಡೆಂದು ಬೇಡುವೆನು ||
|| ಓ ಅಂಬೇ ಜಗದಂಬೆ| ಓ ... ಅಂಬೇ..ಮೂಕಾಂಬೆ ||ಮನ

ನೀನಗತಿಯು ಎಂದೇ... ನ್ನಾನಂಬಿ ಕರೆವೆಬಾರೇ |
ಕರುಣೆ ತೋರಿ ಎನ್ನಾ... ತಾಯಿ ಕೈಯ್ಯ ಪಿಡಿಯುಬಾರೆ |
ಮುದದಿಂದಾ | ಒಲವಿಂದಾ| ದಯಮಾಡಿ ಒಲಿದು ಬಾರೇ...|
ತಡವೇಕೇ ಪದುಮಾಕ್ಷಿ ಒಳಗಣ್ಣ ತೆರೆಯ ಬಾರೇ|
ಈ ಭವದಾ ಪರಿತಾಪ ಬೇಡೆನಗೆ ಕರುಣ ತೋರೇ|
ನಿನ್ನೊಡಲಾ... ಶಿಶುವಾಗೀ ಎನ್ನಪ್ಪಿಕೊಳ್ಳುಬಾರೇ ||
|| ಓ ಅಂಬೇ ಜಗದಂಬೆ| ಓ ... ಅಂಬೇ..ಮೂಕಾಂಬೆ||
||ಮನ ತುಂಬಿ ನಿಂತಿರುವ||

## ಮಾತಾಡು ಮಾತಾಡು

ಮಾತಾಡು ಮಾತಾಡು ಅಂಬಿಕೇ |
ನೀ ಮಾತಾಡದಿದ್ದರೆ ನಾ ಹೇಗೆ ಇರಲಮ್ಮ |
ಮಾತಾಡು ಮಾತಾಡು ಅಂಬಿಕೇ... ||ಪ||

ಮೌನವಿನ್ನೇತಕೆ | ಪರಿಹಾಸವೇತಕೆ |
ದೀನಳು ನಾನು ನೀಕಾಯ ಬೇಕೇ ||
ಕಾಲಿಗೆ ಪಗ್ಗವ ಹಾಕುತ ಎಳೆದರೆ| ಓಡುವುದ್ಹೇಗೆ ಹೇಳಮ್ಮ |
ಬಾಳಿನ ಬೇಗೆಯು ದಹಿಸುತಲಿದ್ದರೆ | ಶಾಂತಿಯು ಎಲ್ಲಿದೆ ಹೇಳವ
||ಮಾತಾಡು ಮಾತಾಡು||

ಏನೇ ಬಂದರು । ಏನೇ ಆದರು । ನೀಗತಿಯಲ್ಲದೆ ಬೇರುಂಟೇ।
ನಿನ್ನನೆ ನಂಬಿ ಕುಳಿತಿರುವೆನಗೇ। ನಿನ್ನನು ಬಿಟ್ಟರೆ ಯಾರುಂಟೇ?

ನೀನೇ ಕಾವಲು ಹಾಕಿಹ ಭೂತರು । ಬಿಡುವರೆ ನಿನ್ನೆಡೆ ನನ್ನನ್ನು।
ಸುಡುತಿಹ ಕಾಮನು। ದಹಿಸಿಹ ಕ್ರೋಧನು। ಕಾಣಲು ಬಿಡುವರೆ

ನನ್ನೀ ಪ್ರಶ್ನೆಗೆ ನೀನೆ ಉತ್ತರ । ಮೌನವ ಮುರಿದೂ ನೀಡಮ್ಮ ।
ಭಕ್ತಿಯು ನೀಡದೆ ಮೋಹಕೆ ತಳ್ಳಲು । ಮುಕ್ತಿಯು ಕಾಣ್ವುದು ಹೇಗಮ್ಮಾ॥

ಕರುಣಾ ಸಾಗರಿ ನೀನಮ್ಮಾ। ಮೂಕಾಂಬಿಕೆ ಮಾತಾಡಮ್ಮಾ।
ಮೂಕಾಂಬಿಕೆ ಮಾತಾಡಮ್ಮ ||
||ಮಾತಾಡು ಮಾತಾಡು ಅಂಬಿಕೆ||

## ನಿನ್ನೊಳೆನ್ನ

ನಿನ್ನೊಳೆನ್ನ ಚಿತ್ತವಿರಿಸಿ ಕಾಪಾಡು ಅಂಬಿಕೆ।
ಕಾಲನಂತೆ ಸುಡುವ ಮೋಹ ಹರಿಸಿ ಕಾಯೆ ಅಂಬಿಕೆ
ಭಗ್ನಮನದಿ ದಗ್ಧವಾಗಿ ಜಾರುತಿಹುದು ನಂಬಿಕೆ।
ಮುಳುಗುತಿರುವೆ ಜನ್ಮವ್ಯರ್ಥ ದಡವ ತೋರೆ...
ಏತಕೇ ... ಏತಕೇ... ಇನ್ನು ತಡವು ಏತಕೇ?

ಕಣ್ಣ ನೀರು ಜಾರುತಿಹುದು ಕಾಣದಲೆ ನಿನ್ನಾ ।
ಕಂಠ ಬಿಗಿದು ನೋಯುತಿಹುದು ಕೂಗಿ ಕೂಗಿ ನಿನ್ನ ।
ಪ್ರಾಣ ಗತಿಯು ಲಯುವ ತಪ್ಪಿ ಹಾರಿ ಹೋಗ್ವ ಮುನ್ನ ।
ಒಮ್ಮೆ ನೀನು ದಯವ ತೋರೆ । ಬದುಕು ಎಂಥ ಚೆನ್ನ ।
||ನಿನ್ನೊಳೆನ್ನ ಚಿತ್ತವಿರಿಸಿ||

# ಏಳಮ್ಮ ತಾಯೆ

ಏಳಮ್ಮ ತಾಯೆ ಎದ್ದೇಳು ಮಾಯೆ ಕಣ್ಮುಚ್ಚಿ ಕುಳಿತೆ ಏಕೆ?
ಕುಡಿನೋಟ ಹರಿಸಿ ಕಣ್ಣೀರ ಒರೆಸಿ ಕಾಪಾಡು ಲೋಕ ಮಾತೆ।
ಓ ಅಂಬೇ... ಜಗದಂಬೆ। ಓ ಅಂಬೇ... ಮೂಕಾಂಬೆ॥

ಏಳು ಬೀಳುಗಳ ಸುಳಿಗೆ ಸಿಲುಕಿ ಜರ್ಝರಿತಳಾದೆ ತಪಿಸೀ।
ಏತಕ್ಕೆ ಇನ್ನು ಪರಿಪರಿಯ ಶೋಧ ತಣಿದಿಲ್ಲವೇನು ಮನದೀ॥
ಓ ಅಂಬೇ... ಜಗದಂಬೆ। ಓ ಅಂಬೇ... ಮೂಕಾಂಬೆ॥

ವರುಷ ಉರುಳುತಿದೆ ಆಯು ಮುಗಿಯುತಿದೆ ಅರಿಯದಾದೆ ನಿನ್ನ।
ಅರಿಯ ಬಾಧೆ ಭೋರ್ಗರೆದು ಸುಳಿಗೆ ತಳ್ಳುತಲಿ ಇಹುದು ಎನ್ನ।
ಓ ಅಂಬೇ... ಜಗದಂಬೆ। ಓ ಅಂಬೇ... ಮೂಕಾಂಬೆ॥

ಮೋಹಿನಿಯ ಕಾಟ ಮೈಮರೆವ ಆಟ ಘನ ಘೋರ ಕಾಟವಮ್ಮ।
ಕೈಪಿಡಿದು ಕಾಯೆ ನೀನಮ್ಮ ಮಾಯೆ ಜಗಜ್ಜಾಲ ನಿನ್ನದಮ್ಮ॥
ಓ ಅಂಬೇ... ಜಗದಂಬೆ। ಓ ಅಂಬೇ... ಮೂಕಾಂಬೆ॥

ಬಂಧನವು ಏಕೆ ಬಳಲಿಡೆನು ಸಾಕೆ ಕರುಣೆಯೆನು ತೋರೆ ಏಕೆ?
ನಿನ್ನ ಕಾಣದಿರಲು ಈ ಜನ್ಮವೇಕೆ ಬಳಿ ಬಾರೆ ಮೌನವೇಕೆ।
ಓ ಅಂಬೇ... ಜಗದಂಬೆ। ಓ ಅಂಬೇ... ಮೂಕಾಂಬೆ॥

ಬಾರಮ್ಮ ತಾಯೆ ಮೂಕಾಂಬೆ ತಾಯೆ ಚಿಚ್ಛಕ್ತಿಯೋಗ ಮಾಯೆ।
ನಿನ್ನಡಿಯ ಲಿಂದು ಬಿದ್ದಿಹೆನು ಬಂದು ಕಾಯಮ್ಮ ನೀನೆ ಬಂಧು॥
ಓ ಅಂಬೇ... ಜಗದಂಬೆ। ಓ ಅಂಬೇ... ಮೂಕಾಂಬೆ॥

ನೊಂದ ಕಂದನ ನುಡಿಯ ಆಲಿಸಿ। ಓಡಿ ಬಂದಳು ದೇವಿಯು।
ತಲೆಯ ಸವರುತ। ಹಣೆಯ ಚುಂಬಿಸಿ। ಇಂತು ನುಡಿದಳು ತಾಯಿಯು।

ಏಳು ಕಂದಾ। ಏಕೆ ಅಳುವೆ।
ನಿನ್ನನಗಲೀ ಇರುವೆನೇ?
ನನ್ನ ಮಡಿಲಾ ಮಗುವು ನೀನು।
ನಿನ್ನ ಅಳಿಸೀ ನಗುವೆನೇ
ನಾನಿನ್ನ ಅಳಿಸೀ ನಗುವೆನೇ...?
(ಆ ದೇವಿಯ ಹಸ್ತ ಸ್ಪರ್ಶವಾಗಲು..)

ಆನಂದದಿಂದ ಕಣ್ಣೀರ ಕೋಡಿ। ಹರಿಯುತಲಿ ಪಾದ ತೊಳೆದು।
ಬಾಚಿದಳು ಅಮ್ಮ ತಬ್ಬಿದಳು ಅಮ್ಮ। ಎಂದೆನುತ ಹಿಗ್ಗಿ ಮೆರೆದು।
ಕರುಣಾಳು ನೀನು ಒಲಿದಿರಲು ಇನ್ನು ಹಂಗೇಕೆ ಯಾರದಿನ್ನು।
ಅರಿತಾಯ್ತು ನಿನ್ನ ಬೆರತಾಯ್ತು ನಿನ್ನ ಬಾಳೆಲ್ಲ ಹಾಲು ಜೇನು।
ಜೈಜೈ ಜಗದಂಬೇ। ಜೈಜೈ ಮೂಕಾಂಬೆ।
ಜೈ ಜೈ ಜಗವಂಬೇ। ಜೈಜೈ ಲೋಕಾಂಬೆ॥

## ತಂದೆ ತಾಯಿ

ತಂದೆ ತಾಯಿ ಬಂಧು ಬಳಗ ಎಲ್ಲ ತಾಯೆ ಅಂಬಿಕೆ।
ಎಲ್ಲ ನಿನದೆ ಎಂದು ಕೊಳುವ ಜಂಭ ನಿನಗೆ ಏತಕೆ।
ಕೊಂಬು ಕೊಳುವುದೆಲ್ಲ ಅವಳ ಲೀಲೆ ಮರೆತೆ ಏತಕೆ।
ಡಂಭತನಕೆ ಒಲಿವಳಲ್ಲ ಮರೆಯಬೇಡ ಜೋಕೆ॥ ॥ತಂದ

ಅಣು ಅಣುವಲು ಕಣಕಣದಲು। ಅಡಗಿರುವಳು ಅಂಬಿಕೆ।
ಕ್ಷಣ ಕ್ಷಣದಲು ನವಸೃಷ್ಟಿಯ ಮಾಡುವಳೀ ಬ್ರಹ್ಮೆ॥
ಹುಟ್ಟು ಸಾವು ಚಕ್ರ ರಥಕೆ ಸಾರಥಿ ಈ ಅಂಬಿಕೆ।
ಶತ್ರುಗಳ ಸೊಕ್ಕು ಮುರಿವ। ಜಯದ್ರಥೆ ವಿಜಯಾಂಬಿಕೆ ॥ತಂದ

॥ತಂದೆ ತಾಯಿ ಬಂಧು ಬಳಗ ಎಲ್ಲ ತಾಯೆ ಅಂಬಿಕೇ॥

## ಮಮತಾಮಯಿ

ಮಮತಾ ಮಯಿ ಮಾತಾ ಓಮಾತಾ। ನೀನೇ ಅನ್ನದಾತಾ ॥ಪ॥
ಅಚ್ಚರಿ ಏನಿದು ಕೋಪದಿ ನೆನೆದರು।
ಓಡಿ ಬಂದು ನೀ ಸಲಹಿದೆಯೋ।
ಭಕ್ತಿಭಾವದಲಿ ಒಮ್ಮೆ ನಿನ್ನ ನೆನೆದರೂ।
ಜಗವನೆ ನನ್ನದು ಮಾಡುವೆಯೊ ॥ಮವ

ನಿನ್ನನು ಮರೆತುನಾ ಗರ್ವದಿ ನಡೆದರು।
ಬೆನ್ನತಟ್ಟಿ ಎನ್ನ ಕೂಗಿದೆಯೋ।
ಬೆಳಕದು ಕತ್ತಲ ನುಂಗಿದ ಪರಿಯಲಿ
ಅಜ್ಞಾನವನು ಕಳಚಿದೆಯೋ... ||ಮಮತಾ|

ದಾರುಣ ಕರ್ಮದ ಹೊರೆಯನು ಇಳಿಸುತ।
ಕೈಪಿಡಿದೆನ್ನ ನಡೆಸಿದೆಯೋ
ದಾರಿಗಾಣದೆ ಪಾರು ಮಾಡೆನ್ನಲು
ಓಡಿ ಬಂದೆನ್ನ ಅಪ್ಪಿದೆಯೋ ||ಮಮತಾ|

ಕತ್ತಲ ಬಾಳಲಿ ಎಡವದೆ ನಡೆಯಲು
ಆತ್ಮ ಜ್ಯೋತಿಯ ಇರಿಸಿದೆಯೋ।
ತನ್ನಲಿ ಬೆಳಗುವ ಜ್ಯೋತಿಯ ಕಾಣಲಿ
ಎನುತ ಕಷ್ಟಗಳ ನೀಡಿದೆಯೋ...
ಮಾಯೆಯ ಬಲೆಯ ಬೀಸಿದೆಯೋ ||ಮಮತಾ||

## ಜಯ ಜಯ ಭಗವತಿ

ಜಯ ಜಯ ಭಗವತಿ ಎಲ್ಲಮ್ಮ| ಜಯ ಜಯ ಗುಣವತಿ ಎಲ್ಲಮ್ಮ|
ಕರವನು ಮುಗಿಯುವೆ ಬಾರಮ್ಮ| ನಮ್ಮಯ ಹೃದಯದಿ ನೆಲಸಮ್ಮ||
||ಎಲ್ಲಮ್ಮಾ... ಎಲ್ಲಮ್ಮ| ಏಳು ಕೊಳ್ಳದ ತಾಯಿ ನೀನಮ್ಮ||

ಜಮದಗ್ನಿ ಸತಿಯೇ ಎಲ್ಲಮ್ಮ| ಜನನ ಮರಣ ಶೋಕ ಕಳೆಯಮ್ಮ|
ನೇಮ ನಿಷ್ಠೆಯೊಳು ನಿನ್ನಯ ಸೇವೆಯ|ಮಾಡುವ ಭಾಗ್ಯವ ನೀಡಮ್ಮ ||
||ಎಲ್ಲಮ್ಮಾ... ಎಲ್ಲಮ್ಮ| ಏಳು ಕೊಳ್ಳದ ತಾಯಿ ನೀನಮ್ಮ||

ಭಾರ್ಗವ ಮಾತೆ ಎಲ್ಲಮ್ಮ| ಭೂ ಭಾರವ ನಿಳುಹಲು ಬಂದ್ಯಮ್ಮ|
ಭಕ್ತರಿಗೆಲ್ಲಾ ಭಾಗ್ಯವ ನೀಡುವ| ಮಂಗಳ ದೇವಿಯು ನೀನಮ್ಮ||
||ಎಲ್ಲಮ್ಮಾ... ಎಲ್ಲಮ್ಮ| ಎಲ್ಲರ ಕಾಯುವ ಜಗದಮ್ಮ||

ರೇಣುಕ ದೇವಿಯೆ ಎಲ್ಲಮ್ಮ। ನಿನ್ನ ಭಜನ ಸೌಭಾಗ್ಯವ ನೀಡಮ್ಮ।
ಭ್ರಮೆಯೊಳು ಬಿದ್ದಿಹ। ಭುವನದ ಜನರ। ಬವಣೆಯು ನೀಗಿ ಕಾಯಮ್ಮ
||ಎಲ್ಲಮ್ಮಾ... ಎಲ್ಲಮ್ಮ। ಸವದತ್ತಿ ತಾಯಿಯೆ ಎಲ್ಲಮ್ಮ||

ಭಕ್ತೋದ್ಧಾರಿಣೆ ಎಲ್ಲಮ್ಮ।ಭಂಡಾರ ನಿಧಿಯು ನೀಡಮ್ಮ।
ಉಧೋ ಉಧೋ ಎನ್ನುವ ತಾರಕ ಮಂತ್ರವ।
ಎನ್ನಯ ಉಸಿರಾಗಿರಿಸಮ್ಮಾ||
||ಎಲ್ಲಮ್ಮಾ... ಎಲ್ಲಮ್ಮ। ಎಲ್ಲರ ಕಾಯೋ ಜಗದಮ್ಮ||

ಸರ್ವ ಮಂಗಳೆ ಎಲ್ಲಮ್ಮ। ನಮ್ಮ ಹೃದಯದಿ ಬಂದು ನೆಲಸಮ್ಮ।
ಬೇಡಿದ ಭಕ್ತರ ಕಷ್ಟ ಕೋಟಲೆಯ। ನೀಗುತ ಶಾಂತಿಯ ತಾರಮ್ಮ।
||ಎಲ್ಲಮ್ಮಾ... ಎಲ್ಲಮ್ಮ। ಏಳು ಕೊಳ್ಳದ ತಾಯೆ ಎಲ್ಲಮ್ಮ||

## ಬರಬಾರದೇನಮ್ಮ ಶ್ರೀಎಲ್ಲಮ್ಮ

ಬರಬಾರದೇನಮ್ಮ ಶ್ರೀಎಲ್ಲಮ್ಮ। ಬರಬಾರದೇನಮ್ಮ।
ಬರಬಾರದೇನಮ್ಮ ಬರಕಳೆದು ಹರಸುತ್ತ।
ಇರಬಾರದೇನಿಲ್ಲಿ ಇಷ್ಟಾರ್ಥಗಳ ನೀಡಿ ||ಬರಬಾರದೇ||

ಕಾಯವಾಚಾ ಮನಸಾ ನಿನ್ನಯ ನಾಮ। ಸಾಸಿರದಲ್ಲಿ ಪೊಗಳುವೆ।
ಏಕವೀರಮ್ಮ। ಜಗದೇಕ ವೀರನತಾಯೆ।
ಜಮದಗ್ನಿ ಸತಿಯೆ। ಮಹಪತಿವ್ರತೆ ಸುಮಂಗಲಿ ||ಬರ||

ಮಂಗಳವಾರದಲಿ ಮಂಗಳೆಯರು। ಸಂಭ್ರಮದಿಂ ಓಲೈಸಿ।
ಅಂಗಳ ತುಂಬೆಲ್ಲ ರಂಗೋಲಿಯನು ಹಾಕಿ।
ಸಿಂಗರಿಸಿ ದಿವ್ಯ ಮಂಟಪಕೊಯ್ವರು ||ಬರ||

ತಳಿರು ತೋರಣದಿಂದಲೇ ಝಗಝಗಿಸುವ
ಹೊಳೆ ಹೊಳೆವಲಂಕಾರದೀ।
ಘಮ ಘಮಿಸುವ ಪುಷ್ಪ ಮಲ್ಲೆ ಹಾರವ ಹಾಕಿ।
ತಂಬಿಟ್ಟಿನಾರತಿಯನ್ನು ಬೆಳಗುವರು ||ಬರ||

ಪೀತಾಂಬರವ ಉಡಿಸಿ। ನವರತ್ನದ ಆಭರಣಗಳ ತೊಡಿಸಿ।
ತುಂಬಿ ನಿನ್ನಯ ಮಡಿಲ । ತಾಂಬೂಲ ಸಹಿತಲಿ।
ಮಂಗಳಾರುತಿ ಎತ್ತಿ। ಮನಸಾರೆ ಸ್ತುತಿಸುವೆವು

ಮುದ್ದು ಮುಖದ ಸಿರಿಯೆ ರೇಣುಕೆ ತಾಯೆ।
ಕರುಣೆಯಿಂದಲಿ ಒಲಿಯೇ।
ಉಧೋ ಉಧೋ ಎನ್ನುತಲಿ । ವಿಧ ವಿಧ ಭಜಿಸುತ್ತ ।
ಪದುಮಾಕ್ಷಿ ನಿನ್ನ ಪಾದ। ಮುದದಿ ಪೂಜಿಪೆವೂ।
||ಬರಬಾರದೇನಮ್ಮ ಶ್ರೀ ಎಲ್ಲಮ್ಮ||

## ಮಾಯಗಾರ್ತಿ

ಮಾಯಗಾರ್ತಿ ನೀನಮ್ಮ । ಮಂತ್ರಗಾರ್ತಿನೀನಮ್ಮ ।
ಸರ್ವಶಕ್ತಿ ನೀನಮ್ಮ। ಎಲ್ಲಮ್ಮಾ...।
ಎಲ್ಲಾ ನಿನ್ನ ಲೀಲೆ ಕೇಳಮ್ಮಾ ...||ಪ||

ಸುಂದರ ವದನೇ । ಚಂದಿರ ನಯನೇ
ಚಿನ್ಮಯ ಮಂದಿರಾಂಬರ ವಸನೇ।
ಭಾಗ್ಯದ ಲಕ್ಷ್ಮಿಯೇ....ಬಾರಮ್ಮ||
ಜಗನ್ಮೋಹಿನೀ। ಶುಭಕಾಮಿನಿ।
ತ್ರಿಪುರ ಸುಂದರಿಯೇ ಬಾರಮ್ಮಾ...
ಭಾಗ್ಯದ ಲಕ್ಷ್ಮಿಯೇ ಬಾರಮ್ಮಾ...

ಕಂಗಳ ಕಾಂತೀ । ಹಿಡಿಸಿದೆ ಭ್ರಾಂತಿ।
ಸಿಂಗಾರಿ ಮೋಹಿನಿ । ಸುರ ಸುಂದರಿ ವಯ್ಯಾರೀ।
ಭಾಗ್ಯದ ಲಕ್ಷ್ಮಿಯೇ ಬಾರಮ್ಮಾ...।
ಪಡಿ ನೀಡುವೇ। ಅಡಿಗೆರಗುವೇ।
ಉಧೊ ಘೋಷವಾ... ಮರು ನುಡಿಯುವೇ।
ತ್ರಿಪುರಾ ಸುಂದರಿಯೆ ಬಾರಮ್ಮಾ ...।
ಭಾಗ್ಯದ ಲಕ್ಷ್ಮಿಯೇ ಬಾರಮ್ಮಾ...||
||ಮಾಯಗಾರ್ತಿ ನೀನಮ್ಮ||



# ಚೆಂದುಳ್ಳಿ ಚೆಲುವಿ

ಚೆಂದುಳ್ಳಿ ಚೆಲುವೀಕಿ ಎಲ್ಲವ್ವ । ನಿನ್ನಂದಾಕೆ ಸರಿಸಾಟಿ ಇಲ್ಲವ್ವ ॥
ರಾಮಯ್ಯ ನಗರದಿ ನಿಂತ್ಯವ್ವ । ನಮ್ಮ ಕಷ್ಟಗಳೆಲ್ಲವ ಬಡಿದ್ಯವ್ವ ॥ಚೆಂದುಳ್ಳಿ॥

ಜಮದಗ್ನಿ ಪತಿಕೂಡೆ ಬಂದ್ಯವ್ವ ।
ಜಗಕೆ ಸತಿಧರ್ಮಸಾರುತ್ತ ಕುಂತ್ಯವ್ವ ।
ಘೋರ ಕ್ಷಾಮವ ನೀಗೆ ಬಂದ್ಯವ್ವ ।
ಪರುಶುರಾಮಾಗೆ ಜನ್ಮವನಿತ್ಯವ್ವಾ ॥ಚೆಂದುಳ್ಳಿ॥

ಹೂವಂಥ ಮನವು ನಿನ್ನದವ್ವ ।
ನಿನಗೆ ನಡೆ ಮುಡಿ ಹಾಸುವೆ ಬಾರವ್ವ ।
ಕಲ್ಯಾಣಿ ಮಂಗಳೆಯು ನೀನವ್ವ ।
ನಮಗೆ ಭಂಡಾರ ಸಿರಿಇತ್ತು ಹರಸವ್ವ ॥ಚೆಂದುಳ್ಳಿ॥

ನೋಡವ್ವ । ಕೇಳವ್ವ । ಎಲ್ಲವ್ವ ।
ನಮ್ಮ ಭಜನೆಗೆ ತಪ್ಪದೆ ಬಾರವ್ವ ।
ನಿನ್ನ ಕರುಣೆಯ ಕಡಲನ್ನು ಹರಿಸವ್ವ ।
ನಿನ್ನ ಸಿರಿಮುಡಿಯ ಹೂವಾಗಿ ಇರಿಸವ್ವ ॥ಚೆಂದುಳ್ಳಿ॥

ಎಲ್ಲವ್ವಾ.. ಎಲ್ಲವ್ವಾ। ಎಲ್ಲರ ಮನದೊಳು ಎಂದೂ ನೀನು ನೆಲಸವ್ವ ॥

ಎಲ್ಲೆಲ್ಲೂ ನಿನ್ನ ಗುಡಿಗೋಪುರಗಳ ಇರಲವ್ವ ।
ನೆಮ್ಮದಿ ಸೌಖ್ಯವ ಹೊಂದುತ ಎಲ್ಲರು ನಗಲವ್ವ ।
ಜಾತಿ ಭೇದ ಮರೆತು ಎಲ್ಲರು ನಗಲವ್ವ ॥

# ಮುತ್ತಂಥ ಎರಡಕ್ಷರ

ಮುತ್ತಂಥ ಎರಡಕ್ಷರಾ ನುಡಿದರೆ ಕಳೆವುದು ಭವ ಭಾರಾ।
ಹೆಚ್ಚೇನು ಬೇಕಿಲ್ಲ । ಹೆಜ್ಜೇನು ಸವಿರೆಲ್ಲ ।
ಉಧೋ ಉಧೋ। ಉಧೋ ಉಧೋ ನುಡಿಸಾವಿರಾ
ಹಾಯಾಗಿ ದಾಟುವೆ ಭವಸಾಗರಾ...॥ಪ॥

ಅಲ್ನೋಡಿ ಮಹತಾಯಿ। ಕಿವಿಗೊಟ್ಟು ಕೇಳಿಹಳು।
ಮೊರದಗಲ ಮೊಗಮಾಡಿ। ಇಣುಕಿಣುಕಿ ನೋಡಿಹಳು।
ಉಧೋ ಉಧೋ।ಉಧೋ ಉಧೋ ನುಡಿ ಸಾವಿರಾ।
ಹಾಯಾಗಿ ದಾಟುವೆ ಭವ ಸಾಗರ ॥ಮುತ್ತಂಥ॥

ಬೆವರನ್ನು ಒರೆಸುತ್ತ। ಬಾಯಾರಿ ದಣಿಯುತ್ತ।
ಕೈಚಾಚಿ ಕರೆಯುತ್ತ । ಕುಳಿತಿಹಳು ಕಾಯುತ್ತ॥
ಉಧೋ ಉಧೋ। ಉಧೋ ಉಧೋ ನುಡಿಸಾವಿರಾ...
ಹಾಯಾಗಿ ದಾಟುವೆ ಭವಸಾಗರ ॥ಮುತ್ತಂಥ॥

ಉಧೋ ಉಧೋ ನುಡಿಕೇಳಿ।ಮನವಿಃ ಹರ್ಷವ ತಾಳಿ।
ದುಷ್ಟರ ಎದೆ ಸೀಳಿ। ನಿಂತಳು ಮೈ ತಾಳಿ॥
ಉಧೋ ಉಧೋ। ಉಧೋ ಉಧೋ ನುಡಿಸಾವಿರಾ।
ಹಾಯಾಗಿ ದಾಟುವೆ ಭವಸಾಗರ ॥ಮುತ್ತಂಥ॥

ಜಯ ಜಯ ಎಲ್ಲಮ್ಮ। ಜಯ ಜಯ ರೇಣುಕಾಮ್ಮ।
ಭಕ್ತಗೆ ಒಲಿಯುವ ಸಿರಿಮಾತೆ ನೀನಮ್ಮ ।
ಉಧೋ ಉಧೋ ಮೊಳಗಿರಿ ಜಯಘೋಷವಾ ।
ಹಾಯಾಗಿ ಕಳೆಯುವೆ ಭವ ಭಾರವಾ ॥ಮುತ್ತಂಥ॥

# ಉಧೋ ಉಧೋ ಎಲ್ಲಮ್ಮ

ಉಧೋ ಉಧೋ ಉಧೋ...ಉಧೋ ...।
ಎಲ್ಲಮ್ಮ ದೇವಿಯೆ ಉಧೋ... ಉಧೋ...।।

ಅಂಬ ಭವಾನಿಯೆ । ಉಧೋ...ಉಧೋ।
ಅಖಿಲಾಂಡೇಶ್ವರಿ । ಉಧೋ...ಉಧೋ।
ಅದಿತಿ ದೇವಿಯೇ। ಉಧೋ...ಉಧೋ।
ಆದಿಪರಾಶಕ್ತಿ । ಉಧೋ...ಉಧೋ।
ಉಧೋ...ಉಧೋ। ಉಧೋ ಉಧೋ। ಎಲ್ಲಮ್ಮ ದೇವಿಯೆ ।
ಉಧೋ...ಉಧ

ಸವದತ್ತಿ ತಾಯಿಯೆ । ಉಧೋ...ಉಧೋ।
ಚಂದ್ರಗುತ್ತಿ ದೇವಿಯೆ। ಉಧೋ...ಉಧೋ।
ಬಂಕಾಪುರ ಮಾತೆಯೆ । ಉಧೋ...ಉಧೋ।
ಭಂಡಾರ ಸಿರಿ ದೇವಿ । ಉಧೋ...ಉಧೋ।
ಉಧೋ...ಉಧೋ । ಉಧೋ ಉಧೋ। ಎಲ್ಲಮ್ಮ ದೇವಿಯೆ ।
ಉಧೋ...ಉಧ

ಏಳು ಕೊಳ್ಳದ ತಾಯೆ । ಉಧೋ...ಉಧೋ।
ಏಕ ವೀರಮ್ಮನೆ । ಉಧೋ...ಉಧೋ।
ಸುರಮುನಿವಂದಿತೆ । ಉಧೋ...ಉಧೋ।
ಭಕ್ತರ ಕಣ್ಮಣಿ । ಉಧೋ...ಉಧೋ।
ಉಧೋ...ಉಧೋ । ಉಧೋ ಉಧೋ। ಎಲ್ಲಮ್ಮ ದೇವಿಯೆ ।
ಉಧೋ...ಉಧ

ರೇಣುಕ ರಾಜ ಪುತ್ರಿ । ಉಧೋ...ಉಧೋ।
ಜಮದಗ್ನಿ ಸತಿಯೇ । ಉಧೋ...ಉಧೋ।
ಭಾರ್ಗವ ಮಾತೆಯೆ । ಉಧೋ...ಉಧೋ।
ಭಾಗ್ಯದ ಲಕ್ಷ್ಮಿಯೆ। ಉಧೋ...ಉಧೋ।
।।ಉಧೋ...ಉಧೋ। ಉಧೋ...ಉಧೋ।।

ಏಕನಾಥ ಜೋಗನಾಥ |ಉಧೋ...ಉಧೋ|
ಮಂಗಳವಾರದ ಮುತ್ತೈದೆಗೆ |ಉಧೋ...ಉಧೋ|
ಶುಕ್ರವಾರದ ಮಹಾಲಕ್ಷ್ಮಿಗೆ |ಉಧೋ...ಉಧೋ|
ರೇಣುಕ ಮಾತೆಗೆ |ಉಧೋ...ಉಧೋ|
ಉಧೋ...ಉಧೋ| ಉಧೋ ಉಧೋ| ಎಲ್ಲಮ್ಮ ದೇವಿಗೆ| ಉಧೋ...ಉಧೋ

## ಮಲಗುವಾಗ ಅಮ್ಮ

ಮಲಗುವಾಗ ಅಮ್ಮ ಎನ್ನಿ | ಏಳುವಾಗ ಅಮ್ಮ ಎನ್ನಿ |
ಅಮ್ಮ ನಿಮ್ಮ ಸ್ಮರಣೆಯೊಂದೆ ಸಾಕು ಎನ್ನಿ |
ಇದಕ್ಕಿಂತ ಇನ್ನೇನು ಬೇಡವೆನ್ನಿ ||
ಅಮ್ಮಮ್ಮಾ... ನಮ್ಮಮ್ಮಾ| ನಮ್ಮಮ್ಮಾ ತಾಯಿ ಎಲ್ಲಮ್ಮ ||

ತಿನ್ನುವಾಗ ಅಮ್ಮ ಎನ್ನಿ| ಕುಡಿಯುವಾಗ ಅಮ್ಮ ಎನ್ನಿ
ಉಂಡಾಡಿ ಅಲೆಯುವಾಗ ಅಮ್ಮ ಎನ್ನಿ|
ಅಮ್ಮ ನಿಮ್ಮ ಸ್ಮರಣೆಯೊಂದೆ ಸಾಕು ಎನ್ನಿ ||ಅಮ್ಮಮ್ಮಾ||

ಆಡುವಾಗ ಅಮ್ಮ ಎನ್ನಿ| ಕೂಡುವಾಗ ಅಮ್ಮ ಎನ್ನಿ|
ಕೂಡಾಡಿ ನಲಿಯುವಾಗ ಅಮ್ಮ ಎನ್ನಿ|
ಅಮ್ಮ ನಿಮ್ಮ ಸ್ಮರಣೆಯೊಂದೆ ಸಾಕು ಎನ್ನಿ ||ಅಮ್ಮಮ್ಮಾ||

ಕಷ್ಟದಲ್ಲು ಅಮ್ಮ ಎನ್ನಿ| ಸುಖ ಬಂದ್ರು ಅಮ್ಮ ಎನ್ನಿ|
ಕಷ್ಟ ಸುಖವೆಲ್ಲ ಕಾಲಚಕ್ರವೆನ್ನಿ|
ಅಮ್ಮ ನಿಮ್ಮ ಸ್ಮರಣೆಯೊಂದೆ ಸಾಕು ಎನ್ನಿ ||ಅಮ್ಮಮ್ಮಾ||

ಕನಸಿನಲ್ಲು ಅಮ್ಮ ಎನ್ನಿ| ಮನಸಿನಲ್ಲು ಅಮ್ಮ ಎನ್ನಿ |
ಕನಸು ಮನಸು ಎಲ್ಲಾ ನಿನ್ನ ಮಾಯೆ ಎನ್ನಿ |
ಅಮ್ಮ ನಿಮ್ಮ ಸ್ಮರಣೆಯೊಂದೆ ಸಾಕುಎನ್ನಿ ||ಅಮ್ಮಮ್ಮಾ||

ಮೋಹದಲ್ಲು ಅಮ್ಮ ಎನ್ನಿ | ಪ್ರೇಮದಲ್ಲು ಅಮ್ಮ ಎನ್ನಿ|
ಕಾಮ-ಪ್ರೇಮ-ಮೋಹ ನಿನ್ನ| ಜಾಲವೆನ್ನಿ
ಅಮ್ಮ ನಿಮ್ಮ ಸ್ಮರಣೆಯೊಂದೆ ಸಾಕುಎನ್ನಿ ||ಅಮ್ಮಮ್ಮಾ||

ಡಿಯುವಾಗ ಅಮ್ಮ ಎನ್ನಿ| ಮಡಿಯುವಾಗ ಅಮ್ಮ ಎನ್ನಿ|
ಡಿಮೆ ಮಡಿಮೆ ಎಲ್ಲ ನಿನ್ನ ಪಾದಕೆನ್ನಿ|
ವಸ್ಮುಕ್ತಿಗಾಗಿ ಕರ್ಮ ಯೋಗವೆನ್ನಿ
ದಕ್ಕಿಂತ ಇನ್ನೇನು ಬೇಡವೆನ್ನೀ...||ಅಮ್ಮಮ್ಮಾ||
||ಮಲಗುವಾಗ ಅಮ್ಮ ಎನ್ನಿ||

# ಬಂದಾಳೊ ಬಂದಾಳೊ

ದಾಳೊ ಬಂದಾಳೊ ರೇಣುಕಾಂಬಾ |
ಮ್ಮ ರಾಮಯ್ಯನಗರಿಗೆ ಬಂದಾಳೊ|
ತ್ರಾ ಪರಸಲು | ಭಾಗ್ಯವಾ ನೀಡಲು|
ಶಕ್ತಿಯೂ ಬಂದಾಳೋ...|

ತಿ ದೇವಿಯುತಾ ಲೋಕವ ಬೆಳಗಲು| ಆದಿಲಕ್ಷ್ಮಿಯು ಬಂದಾಳೊ
ಡಾರ ಚೆಲ್ಲುತ ಭಾಗ್ಯವ ನೀಡುತ| ಭಾಗ್ಯದ ಲಕ್ಷ್ಮಿಯು ಬಂದಾಳೋ|| ||ಬಂ||

ರ್ಜರ ಸಲಹುತ ಅಭಯುವ ನೀಡುತ | ಧೈರ್ಯ ಲಕ್ಷ್ಮಿಯು ಬಂದಾಳೊ|
ರರರ ವಧಿಸುತ ಸುರರನ್ನು ಹರಸುತ | ವಿಜಯಲಕ್ಷ್ಮಿಯು ಬಂದಾಳೊ|| ||ಬಂ||

ನ್ಯಾವ ಸುರಿಸುತ್ತ ಲೋಕ ಕ್ಷಾಮವನೀಗ| ಧಾನ್ಯ ಲಕ್ಷ್ಮಿಯು ಬಂದಾಳೊ|
ಜೆಯ ಒಡಲಿನ ಮಗುವಾಗಿ ಆಡುತ್ತ| ಸಂತಾನ ಲಕ್ಷ್ಮಿಯು ಬಂದಾಳೊ ||ಬಂ||

ಮಿತ ದಾಯಿನಿ| ಅರಿಮದಮರ್ದಿನಿ| ಗಜಲಕ್ಷ್ಮಿಯು ತಾ ಬಂದಾಳೊ|
ನಿರಂಜನಿ | ಕಲ್ಯಾಣಿ ಮಂಗಳೆ| ಅಷ್ಟಲಕ್ಷ್ಮಿಯು ಬಂದಾಳೊ ||ಬಂ||

ಚಕ್ರವಾಸಿನಿ|ಆನಂದದಾಯಿನಿ| ರಾಮಭಾರ್ಗವ ಮಾತೆ ಬಂದಾಳೊ|
ರ ಒಡನಾಡಿ ಮೈತಾಳಿ ಕುಣಿಯುತ್ತ | ಜಮದಗ್ನಿ ಸತಿಯು ಬಂದಾಳೊ|| ||ಬಂ||

ಲ್ಲಮ್ಮ ದೇವಿಯು ಬಂದಾಳೋ| ಏಳು ಕೊಳ್ಳದ ತಾಯಿ ಬಂದಾಳೊ|
ೋಗುತಿ ಎಲ್ಲವ್ವ ಬಂದಾಳೋ| ಸವದತ್ತಿ ತಾಯಿ ಬಂದಾಳೋ|
ದಾಳೊ... ಬಂದಾಳೊ... ರೇಣುಕಾಂಬಾ||

# ಹೋಗುವಾ ಬನ್ನಿರಿ

ಹೋಗುವಾ ಬನ್ನಿರಿ। ಎಲ್ಲಮ್ಮ ಜಾತ್ರೆಗೆ।
ಭಕ್ತರು ಕೂಡುತಾ ದೇವಿಯ ಸೇವೆಗೆ।
ಟೊಂಕವಾ ಕಟ್ಟುತಾ। ಬಿಂಕವಾ ಅಟ್ಟುತಾ।
ಕುಣಿಯೋಣು ಹರುಷದಲಿ। ಹ್ಹಾ... ಹ್ಹಾ... ಹ್ಹಾ.. ||ಹೋಗುವಾ||

ಏಳು ಕೊಳ್ಳದ ತಾಯೆ ಎಲ್ಲಮ್ಮ ದೇವಿಯೆ।
ಏಳು ಬೀಳುಗಳೆಲ್ಲ ನಿನ್ನಯಾ ಪಾದವೆ।
ಜಗದೊಡತಿ ನೀನವ್ವ ಸವದತ್ತಿ ಎಲ್ಲವ್ವ ।
ಝುಗ ಮಗಿಸೋ ನಿನ್ನ ಕಂಡು ಹರುಷದಲಿ ಕುಣಿಯುವೆವು
ಹ್ಹಾ... ಹ್ಹಾ... ಹ್ಹಾ.... ||ಹೋಗುವಾ||

ಹಾಡ್ಯಾಡಿ ಕುಣಿಯುತ್ತ । ಕೂಡ್ಯಾಡಿ ನಲಿಯುತ್ತ।
ಹರಕೆಯ ನೀಡುತ್ತ । ಪರಡಿಗೆಯ ತುಂಬುತ್ತ ।
ಚಂದ್ರಗುತ್ತಿಯ ತಾಯ್ಗೆ। ಚವಡಿಕೆಯ ನುಡಿಸುತ್ತ।
ಉಧೊ ಉಧೋ ಎನ್ನುತ್ತ। ಹರುಷದಲಿ ಕುಣಿಯುವೆವು।
ಹ್ಹಾ... ಹ್ಹಾ... ಹ್ಹಾ... ||ಹೋಗುವಾ||

ಅಕ್ಕತಂಗಿ ಅಣ್ಣ ತಮ್ಮ ತಾತ ಅಜ್ಜಿ ನೀವು ಬನ್ನಿ।
ಸಣ್ಣ ಪುಟ್ಟ ಮಕ್ಕಳೇ ಮೈಯ ಮರೆತು ಓಡಿ ಬನ್ನಿ ।
ಜಾತಿಬೇಧ ಎಲ್ಲ ಮರೆತು। ಪ್ರೀತಿಯಿಂದ ಎಲ್ಲ ಕಲೆತು
ತಾಳ ಮೇಳ ದೊಡನೆ ಭಕ್ತಿ ಭಾವದಿಂದ ಭಜಿಸೋಣ ||
ಹ್ಹಾ... ಹ್ಹಾ.... ಹ್ಹಾ.... ||ಹೋಗುವಾ||

ಬನ್ನಿ ಬನ್ನಿ ಹೋಗೋಣ। ಎಲ್ಲಮ್ಮ ಜಾತ್ರೆಗೆ।
ಭಕ್ತಿ ಹೂವು ಹಣ್ಣು ತನ್ನಿ। ದೇವಿಯ ಸೇವೆಗೆ ।
ಗೆಜ್ಜೆ ಕಟ್ಟಿ ಕುಣಿಯುತ್ತ । ಲಜ್ಜೆ ಬಿಟ್ಟು ಹಾಡುತ್ತ।
ತೈ ತಕಧಿಮಿ। ತೋಂ ತಕಝುಣು। ಹರುಷದಲಿ ಕುಣಿಯೋಣು।
ಹ್ಹಾ... ಹ್ಹಾ... ಹ್ಹಾ ||ಹೋಗುವಾ||

# ತೋಂ ತೋಂ ಎಲ್ಲಮ್ಮಾ

ತೋಂ ತೋಂ ಎಲ್ಲಮ್ಮ । ಧೀಂ ಧೀಂ ಎಲ್ಲಮ್ಮ ।
ಆಡುಬಾರೆ ಎಲ್ಲಮ್ಮ । ಕುಣಿಯುಬಾರೆ ಎಲ್ಲಮ್ಮ।
ಇನ್ನು ಏಕೆ ತಡವಮ್ಮ । ಗದ್ದುಗೆ ಇಳಿದು ಬಾರಮ್ಮ ॥
ತೋಂ ತೋಂ ಎಲ್ಲಮ್ಮ ॥ಪ॥

ಘಲ್ ಘಲ್ ಹೆಜ್ಜೆ ಹಾಕುತ್ತ । ಕಂಕಣ ಕೈಯ್ಯ ತಿರುವುತ್ತ।
ಕವಡೆ ಹಾರವ ಕುಣಿಸುತ್ತ । ಬಿಂಕದ ನೋಟವ ಬೀರುತ್ತ।
॥ಆಡು ಬಾರೆ ಎಲ್ಲಮ್ಮ... ಕುಣಿಯು ಬಾರೆ ಎಲ್ಲಮ್ಮ॥

ಪ್ರೇಮದ ಕಣ್ಣನು ತೆರೆಯುತ್ತ ।ದೀನರ ಕಣ್ಣೀರ್ ಒರೆಸುತ್ತ।
ಭಕ್ತಿಯ ರಸದ ಹಣ್ಣನ್ನು । ಭಕ್ತರಿಗೆಲ್ಲಾ ನೀಡುತ್ತ।
॥ಆಡು ಬಾರೆ ಎಲ್ಲಮ್ಮ । ಕೂಡು ಬಾರೆ ಎಲ್ಲಮ್ಮ ॥

ಜಮದಗ್ನಿಯ ಜೊತೆ ಕೂಡುತ್ತ। ಪರುಶುರಾಮನ ಕರೆಯುತ್ತ।
ಕಷ್ಟಗಳೆಲ್ಲವ ಒಡಿಯುತ್ತ।ಇಳೆಯನು ಸ್ವರ್ಗ ಮಾಡುತ್ತ॥
॥ಆಡುಬಾರೆ ಎಲ್ಲಮ್ಮ ।ಕುಣಿಯು ಬಾರೆ ಎಲ್ಲಮ್ಮ ॥

ಭೋಂ ಭೋಂ ಶಂಖದ ನಾದದೊಳು।
ಚಂಡಿಕೆ ಮದ್ದಳೆ ಮೇಳದೊಳು । ಸರಿಗಮ ಪದನಿಸ ರಾಗದೊಳು।
ತತ್ತೈ ತೋಂಕಿಟ ತಾಳದೊಳು ।
॥ಆಡು ಬಾರೆ ಎಲ್ಲಮ್ಮ । ಕೂಡು ಬಾರೆ ಎಲ್ಲಮ್ಮ॥

ವೇದ ಘೋಷವು ಮೊಳಗುತಿದೆ । ಆನಂದಾಮೃತ ಸುರಿಯುತಿದ
ಭಕ್ತಿಯ ಪರಸೆ ನಡೆಯುತಿದೆ। ಸ್ವರ್ಗವೆ ಭುವಿಗೆ ಇಳಿಯುತಿದೆ॥
ಆಡುಬಾರೆ ಎಲ್ಲಮ್ಮ । ಕುಣಿಯುಬಾರೆ ಎಲ್ಲಮ್ಮ॥

ಭಕ್ತರ ಕಣ್ಮಣಿ ಬಾರಮ್ಮ । ಭಾಗ್ಯಲಕ್ಷ್ಮಿಯೇ ಬಾರಮ್ಮ ।
ತ್ರಿಪುರ ಸುಂದರೀ ಬಾರಮ್ಮ । ಆತ್ಮಕೆ ಶಾಂತಿಯ ತಾರಮ್ಮ ।
ಆಡು ಬಾರೆ ಎಲ್ಲಮ್ಮ । ಕುಣಿಯುಬಾರೆ ಎಲ್ಲಮ್ಮ
ಎಲ್ಲಮ್ಮಾ ಎಲ್ಲಮ್ಮಾ । ನಾಟ್ಯರಾಣಿ ನೀನಮ್ಮಾ...॥
॥ ತೋಂ ತೋಂ ಎಲ್ಲಮ್ಮ । ಧೀಂ ಧೀಂ ಎಲ್ಲಮ್ಮ ॥

# ಏಕಮ್ಮ ಈ ಶೋಧ

ಏಕಮ್ಮ ಈ ಶೋಧ ನನ್ನಲೀ ಭೇದ।
ನಾ ತಪಿಸಿ ಅಳುತಿರಲು ನಿನಗಾಯ್ತೆ ಮೋದಾ॥

ಹಿಂದೇನ ಮಾಡಿದೆನೊ ನಾ ಘೋರ ಕರ್ಮ।
ಎಂದಿಗೇ ಅಳಿವುದೋ ಈ ನನ್ನ ಜನ್ಮ ॥ಏಕಮ್ಮ॥

ಕಣ್ಣೀರು ಬತ್ತಿಹುದು ಹೃದಯ ಮೊರೆಯಿಡುತಿಹುದು।
ಈ ಮೋಹ ಬಂಧದೊಳು ಎಲ್ಲ ಅಡಗಿಹುದು।
ಆರಲ್ಲಿ ಮೊರೆಯಿಡಲಿ ಮನಶ್ಶಾಂತಿ ಪಡೆಯಲಿ ।
ಬಳಲಿ ಬೆಂಡಾಗಿಹೆನು ಸೋತು ಕಂಗಾಲಾಗಿ ॥ಏಕಮ್ಮ॥

ಮೈಯೆಲ್ಲ ಕಣ್ಣಿರಲು ಕಾಣದಾಯ್ತೇನು।
ಮಮತೆಯೂ ಹೃದಯವೂ ಕಲ್ಲಾಯಿತೇನು।
ಪರಿ ಪರಿ ಬೇಡಿರಲು ಕಿವಿ ಕೇಳದೇನು।
ನಿನ್ನ ಚರಣದಿ ಜಾಗ ಇಲ್ಲವಾಯ್ತೇನು ? ॥ಏಕಮ್ಮ॥

ಏತಕೇ ನೀನಿತ್ತೆ ಈ ನರಜನ್ಮ ।
ಪಾತಕೀ ನಾನಾದೆ ಅರಿಯದೇ ಮರ್ಮ ।
ಸೂತಕದಿ ಬಂಧಿಸಿದೆ ಈ ಮೋಹ ಕರ್ಮ ।
ಸುಡು ಸುಡು ಅಜ್ಞಾನ ಅತೃಪ್ತ ಕರ್ಮ ॥ಏಕಮ್ಮ॥

ಓಂ ಶಕ್ತಿ ಜಗಜ್ಜನನಿ ನಿನಗೆ ಶರಣಮ್ಮ ।
ನೋವು ತಾಳದೆ ನಿನ್ನ ಮೊರೆ ಹೊಕ್ಕೆ ನಮ್ಮ ।
ಸೆರಗೊಡ್ಡಿ ಬೇಡುವೆನು ಭಕ್ತಿ ನೀಡಮ್ಮ ।
ನಿನ್ನ ಪಾದದಿ ಎನ್ನ ಶಿರವನಿರಿಸಮ್ಮ ॥
॥ಏಕಮ್ಮ ಈ ಶೋಧ ನನ್ನಲೀ ಭೇದ॥

# ತುತ್ತನಿಕ್ಕಿ ಎತ್ತಿಕೊ

ತುತ್ತ ನಿಕ್ಕಿ ಎತ್ತಿಕೊ | ಕೈಯ್ಯ ಪಿಡಿದು ನಡೆಸಿಕೊ|
ಎನ್ನ ಮೊರೆಯ ನೀನು ಕೇಳಿಕೊ|
ಎಲ್ಲಮ್ಮ ತಾಯಿ| ಎನ್ನ ಮೊರೆಯ ನೀನು ಕೇಳಿಕೊ ||ಪ||

ತೊಡೆ ಮೇಲಾದ್ರು ಕೂರ್ಲಿಕೊ| ಕಂಕ್ಳಲ್ಲಾದ್ರು ಎತ್ತಿಕೊ|
ಪಾದ ಧೂಳಿಯಾಗಿ ಇರ್ಲಿಕೋ| ಅಮ್ಮ ನಿನ್ನ ಪಾದ ಧೂಳಿಯಾಗಿ ಇರ್ಲಿ
ಕಷ್ಟನಾದ್ರು ನೀಡಿಕೊ | ಸುಖವನ್ನಾದ್ರು ಕೊಟ್ಟುಕೋ|
ನಿನ್ನ ಭಕ್ತಳಾಗಿ ಇರ್ಲಿಕೊ | ಅಮ್ಮ ನಿನ್ನ ಭಕ್ತಳಾಗಿ ಎನ್ನ ಇರ್ಲಿಕೊ||

ಅರಿಶಿನವಾಗೆ ಬಳ್ದುಕೊ | ಕುಂಕುಮವಾಗೆ ಹಚ್ಚಿಕೊ|
ತಿಲಕವಾಗಿ ಎನ್ನ ಇಟ್ಟುಕೊ|
ನಿನ್ನ ಹಣೆಯ ಸಿಂಧೂರ ವಾಗೆ ಇಟ್ಟುಕೋ||

ಗಂಧವಾಗೆ ಹಚ್ಚಿಕೋ | ವೀಳ್ಯವಾಗೆ ಮೆದ್ದುಕೊ|
ಹಾರವಾಗಿ ನನ್ನ ಹಾಕಿಕೊ|
ನಿನ್ನ ಕೊರಳ ಹಾರವಾಗೇ ಎನ್ನ ಹಾಕಿಕೋ||

ತೋಳಿನಲ್ಲೇ ಅಪ್ಪಿಕೋ | ರೆಪ್ಪೆಯಲ್ಲಿ ಮುಚ್ಚಿಕೋ |
ಹೃದಯದಲ್ಲಿ ಎನ್ನ ಇರಿಸಿಕೋ|
ಅಮ್ಮ ನಿನ್ನ ದೃಷ್ಟಿಯಲ್ಲಿ ಎನ್ನ ಇರಿಸಿಕೋ||
ಸೀರೆಯಾಗೇ ಸುತ್ತಿಕೋ | ಚೋಲಿಯಾಗೆ ಧರ್ಸಿಕೋ|
ಸೆರಗಿನಲ್ಲಿ ಎನ್ನ ಕಟ್ಟಿಕೋ|
ಕೇಳಮ್ಮ ನಿನ್ನ ಸೆರಗಿನಲ್ಲೇ ಎನ್ನ ಕಟ್ಟಿಕೊ|

ವಾಲೆಯಾಗೆ ಇಟ್ಟುಕೊ| ಝುಂಕಿಯಾಗೆ ಸಿಕ್ಕಿಕೊ|
ನತ್ತಿನಲ್ಲಿ ಎನ್ನ ಇಟ್ಟುಕೋ|
ನಿನ್ನ ಮೂಗನತ್ತಿನಲ್ಲಿ ಎನ್ನ ಇಟ್ಟುಕೋ||

ತೋಳ ಬಂಧಿ ಮಾಡಿಕೊ। ಕಂಠಿಹಾರ ಹಾಕಿಕೊ।
ಸೊಂಟ ಪಟ್ಟಿಯಾಗಿ ಸುತ್ತಿಕೊ।
ಅಮ್ಮ ನಿನ್ನ ಸೊಂಟ ಪಟ್ಟಿಯಾಗೆ ಸುತ್ತಿಕೊ॥

ಕಡಗವಾಗೆ ಮಾಡಿಕೊ। ಕಾಲಂದಿಗೆಯ ಮಾಡಿಕೊ।
ಗೆಜ್ಜೆಯಾಗಿ ಎನ್ನ ಹಾಕಿಕೋ।
ಕಾಲಂದಿಗೆಯ ಗೆಜ್ಜೆನಾದವಾಗಿ ಮಾಡಿಕೋ॥

ಜಡೆಬಿಲ್ಲೆಯಾ ಮಾಡಿಕೋ। ಮಾಲೆಯಾಗೇ ಹಾಕಿಕೊ।
ನಿನ್ನ ಮುಡಿಯಲೆನ್ನ ಇರಿಸಿಕೊ।
ಅಮ್ಮ ನಿನ್ನ ಮುಡಿಯ ಹೂವಾಗೆನ್ನ ಸೆಕ್ಕಿಕೋ॥

ತುತ್ತ ನಿಕ್ಕಿ ಎತ್ತಿಕೋ । ಕೈಯ್ಯ ಪಿಡಿದು ನಡೆಸಿಕೋ
ಏನಾದರು ಒಂದು ಮಾಡಿಕೋ।
ಒಟ್ಟಿನಲ್ಲಿ ನಿನ್ನ ಸನಿಹದಲ್ಲೆ ಇರಿಸಿಕೋ॥

## ಕಣ್ಣೀರ ಕಂಡರೆ ನೋಯುವಳು

ಕಣ್ಣೀರ ಕಂಡರೆ ನೋಯುವಳು
ಜಗದಮ್ಮಾ ಮೈದಡವಿ ಕಾಯುವಳು ।
ಹಿಂದು ಮುಂದು ತಾ ತಿರುಗುವಳು ।
ಜಗದಮ್ಮಾ ಭಕ್ತರಿಗೆ ಕಾವಲಿಹಳು

ಉಣ್ಣು ಬಾ ಎಂದು ಕರೆಯುವಳು।
ಭಕ್ಷ ಭೋಜ್ಯ ಪಕ್ವಾನ್ನ ನೀಡುವಳು।
ಕಲ್ಲು ಮಣ್ಣೆಲ್ಲ ತೆಗೆಯುವಳು ।
ಮುತ್ತನಿಕ್ಕೀ ತುತ್ತನ್ನು ನೀಡುವಳು

ಬಯಸಿದ ಸಿರಿಯ ನೀಡುವಳು ।
ಭವ ಭಯವನ್ನು ದೂರ ಮಾಡುವಳು।
ಕ್ಷಣ ಕಾಲ ನಮ್ಮನ್ನು ಅಗಲಿರಳು ।
ತಪ್ಪು ಕಂಡಾರೆ ಕಿವಿ ಮಾತು ಹೇಳುವಳು

ಕಂದ ಛಳಿಯಾಯಿತೇ ಎಂದು ಮರುಗುವಳು।
ತನ್ನ ಸೆರಗಿನಲ್ಲಿ ಮರೆ ಮಾಡುವಳು ।
ಜೋ... ಜೋ... ಲಾಲಿಯನು ಹಾಡುವಳು।
ಮುಂಗುರುಳನ್ನು ಸವರುತ್ತ ಹರಸುವಳು ॥
॥ಕಣ್ಣೀರ ಕಂಡರೆ॥

## ಏನಮ್ಮಾ ಆದಿಶಕ್ತಿ

ಏನಮ್ಮಾ ಆದಿಶಕ್ತಿ । ಎಂತಮ್ಮಾ ಆದಿಶಕ್ತಿ
ನಮ್ಮಮ್ಮಾ ಆದಿಶಕ್ತಿ ಹೇಗಿದ್ದೀಯಾ ।
ಭಕ್ತರನ್ನು ಹುಡುಕಿ ಹುಡುಕಿ ಸೊರಗಿದ್ದೀಯಾ
ಹುಡ್ಕೊದಕ್ಕೆ ಯಾರ್‍ಯಾರನ್ನು ಕಳ್ಸಿದ್ದೀಯಾ ?

ನೂರು ಚಿಪ್ಪು ಗೊನೆ ಬಾಳೆ । ಕಟ್ಟು ಕಟ್ಟು ವಿಳ್ಳೆದೆಲೆ।
ಮಾರುಗಟ್ಲೆ ಹೂವಿನ ಹಾರ ಹಾಕಿದ್ದಾರೆ।
ಎಂದಾದರು ಒಂದು ಹೂವ ಮುಡ್ಡಿದ್ದೀಯಾ ?
ಅಲ್ಲಿ ನಿನ್ನ ಭಕ್ತರನ್ನು ಕಂಡಿದ್ದೀಯಾ ? ॥ಏನಮ್ಮ॥

ಕೊಡಗಟ್ಲೆ ಹಾಲುಕೀರು । ಬುಟ್ಟಿಗಟ್ಲೆ ಭಕ್ಷ್ಯ ಭೋಜ್ಯ।
ನೈವೇದ್ಯಕ್ಕೆ ಇಟ್ಟಿದ್ದಾರೆ । ನೋಡಿದ್ದೀಯಾ ?
ಎಂದಾದರು ಉಂಡು ತೇಗಿ ಮಲಗಿದ್ದೀಯಾ ? ॥ಏನಮ್ಮ॥

ನವರತ್ನ ಪಚ್ಚೆ ಹಾರ । ಡಾಬು ವಂಕಿ ಕಂಠೀಹಾರ।
ಸಿಂಗರಿಸಿ ಕಾವಲಿಟ್ಟು ಕಾಯ್ತಿದ್ದಾರೆ।
ಇಂಥಾ ಪೂಜೆ ಎಲ್ಲಾದರೂ ಕಂಡಿದ್ದೀಯ ?
ನಿನ್ನದೆಂದು ಎಂದಾದರೂ ತಂದಿದೀಯ ॥ಏನಮ್ಮ॥

ನೀನು ಕಲ್ಲುದೇವರೆಂದು । ನೀನು ಏನು ಮುಟ್ಟೊಲ್ಲೆಂದು।
ನಿನ್ನ ಮುಂದೆ ಇಟ್ಟಿದ್ದಾರೆ ತಿಳಿದಿದ್ದೀಯಾ।
ಇಂಥ ಭಕ್ತರನ್ನು ನೋಡಿ ಬೆಚ್ಚಿದ್ದೀಯಾ ।
ಹದ್ರಿಕೊಂಡು ಕಲ್ಲಾಗಿ ಕುಳ್ತಿದ್ದೀಯಾ ॥ಏನಮ್ಮ॥

ವಿಧಿ ನಿಂಗು ಬಿಡಲಿಲ್ಲ ಆಸೆ ನಿಂಗುತಪ್ಪಲಿಲ್ಲ |
ಸೃಷ್ಟಿ ಮೋಹದಲ್ಲಿ ನೀನೆ ಸಿಲ್ಕಿದ್ದೀಯ |
ಭಕ್ತರನ್ನು ಕಾಯೊ ಕರ್ಮ ಹೊತ್ತಿದ್ದೀಯ

ನನ್ನ ಸೃಷ್ಟಿ ಹೀಗೆಕಾಯ್ತು | ಎಣಸಿದ್ದೆಲ್ಲಾ ತಲೆಕೆಳಗಾಯ್ತು
ಎಂದು ತಲೆ ಮೇಲೆ ಕೈಯ್ಯ| ಹೊತ್ತಿದ್ದೀಯಾ|
ಪ್ರಳಯಕ್ಕಾಗಿ ಕಣ್ ಕಣ್ ಬಿಟ್ಟು ಕಾಯ್ತಿದ್ದೀಯಾ|
||ಏನಮ್ಮಾ ಆದಿಶಕ್ತಿ ||

## ಅಪರಾಧ ಮನ್ನಿಸು

ಅಪರಾಧ ಮನ್ನಿಸು | ಅನುಗಾಲ ರಕ್ಷಿಸು|
ಅಜ್ಞಾನ ನೀಗಿಸು | ಅರಿವನ್ನು ಮೂಡಿಸು ||ಪ||

ಬಾಳೆಲ್ಲಾ ಕಳೆಯಿತು ಬವಣೆಯಲ್ಲೇ ಬಳಲಿತು|
ಬರಿದಾದಾ ಮನದೊಳು ಶೂನ್ಯ ತುಂಬಿತು

ಜೀವನದಾ ಜ್ಯೋತಿಯು ಕರಕಾಗೇ ಉರಿಯಿತು|
ಆನಂದ ಕಾಣದೇ ನಿರಾಸೇ ಮೂಡಿತು

ಆಸೆಗಳಾ ಅಗರದೇ| ಮುಗಿಯದಿಹಾ ಕರ್ಮದೇ|
ಅತೃಪ್ತಾ ಬಯಕೆಗೇ | ಮನವೇಕೋ ಬೆಸೆಯಿತು

ಕೊನೆ ಎಲ್ಲೋ ಕಾಣದು | ಚಿಂತೆಗಳು ಮುಗಿಯದು|
ಭವದಾಸೇ ಹಿಂಗದೇ | ಮಹದಾಸೇ ಬೆಳೆಯಿತು

ಭವತಾಪಾ ಮುಗಿಯಲಿ | ಬವಣೆಗಳೂ ಅಳಿಯಲಿ|
ಮನವೆಂದೂ ನಿನ್ನಲೀ | ಸ್ಥಿರವಾಗೇ ನಿಲ್ಲಲೀ |

ಹರಸಮ್ಮಾ ಅಂಬಿಕೇ | ಮಾತೇ... ಮೂಕಾಂಬಿಕೇ||
||ಅಪರಾಧ ಮನ್ನಿಸು||

## ಪಾಪವೆಲ್ಲವಾ ತೊಳೆಯಮ್ಮ

ಪಾಪವೆಲ್ಲವಾ ತೊಳೆಯಮ್ಮ| ಮೋಕ್ಷದ ಹಾದಿಯ ತೋರಮ್ಮ|
ಇನ್ನೆಷ್ಟುದಿನಾ ಈ ತೊಳಲಿಕೆಯು| ಸಾಕಾಗಿದೆ ಮುಕ್ತಿಯ ನೀಡಮ್ಮ|
ಅಮ್ಮಾ.. ಅಮ್ಮಾ ಮೂಕಾಂಬೆಯಮ್ಮ| ದಾರಿಯ ತೋರಿ ಸಲಹಮ್ಮ ||ಪ||

ದಿನಬೆಳಗಾದರೆ ಊಟದ ಚಿಂತೆ| ತೀರದ ಬಯಕೆಯ ಆಸೆಯ ಕಂತೆ|
ಮನವ್ಯಾಪಾರದ ಮುಗಿಯದ ಸಂತೆ| ಚಿಂತಿಸಿ ಚಿಂತಿಸಿ ನಾ ಸೋತೆ||
||ಅಮ್ಮಾ ... ಅಮ್ಮಾ||

ಬಂಧುಬಳಗದಾ ಮೋಹದ ಚಿಂತೆ| ಒಂದೆರಡಾಗುವ ವಿಷಯದ ಬೊಂತೆ|
ಎಲ್ಲಕು ಹೊಣೆಯು ನಾನೆಂಬಂತೆ| ಕುರುಡು ವ್ಯಾಮೋಹದ ಹುಚ್ಚನಂತೆ|
||ಅಮ್ಮಾ ... ಅಮ್ಮಾ||

ಜನುಮ ಜನುಮಕೂ ಕರ್ಮ ಅಪಾರ| ಎಂದಿಗೆ ಮುಗಿವುದು ಈ ವ್ಯವಹಾ
ಕಣ್ಣಿದ್ದರು ಕುರುಡಾಗಿಹ ಮನಕೆ| ಪಾರುಮಾಡು ಗತಿ ತೋರಿ ಜೀವಕೆ||
||ಅಮ್ಮಾ ಅಮ್ಮಾ ಮೂಕಾಂಬೆಯಮ್ಮ| ದಾರಿಯ ತೋರಿ ಸಲಹಮ್ಮ ||

## ಭಕ್ತರಾಗೋಣ

ಭಕ್ತರಾಗೋಣ| ಜೀವಕೆ ಮುಕ್ತಿ ನೀಡೋಣ|
ಆ ಮಹತಾಯಿಯ ಚರಣಕಮಲವ
ಮೊದಲು ನಂಬೋಣ| ಮನಸಿಗೆ ಶಾಂತಿಯ ಹೊಂದೋಣ||

ಹೃದಯವ ತೊಳೆಯೋಣ| ಭಕ್ತಿಯ ಬೀಜವ ಹಾಕೋಣ|
ನಂಬಿಕೆಯಾ ರಸಗೊಬ್ಬರದಿಂದ| ಬೆಳೆಯನು ಬೆಳೆಯೋಣ|
ಭಕ್ತಿಯ ಬೆಳೆಯನು ಬೆಳಸೋಣ ||ಭಕ್ತ||

ಕಣ್ಣನು ತೆರೆಯೋಣ| ಒಳಗಣ್ಣನು ತೆರೆಯೋಣ|
ಒಳಗು ಹೊರಗು ಆವರಿಸಿಹ ಮಾಯೆಯ|
ಮರ್ಮವ ತಿಳಿಯೋಣ| ದೇವಿಯ ಕೃಪೆಯನು ಪಡೆಯೋಣ| ||ಭಕ್ತ||

ಸಂಗವ ಸೇರೋಣ। ಭಕ್ತರ ಸಂಗವ ಸೇರೋಣ
ಸಾಧು ಸಜ್ಜನರ ಸಹವಾಸದಲಿ।
ಆತ್ಮನ ತಿಳಿಯೋಣ। ಅಂತರ ಜ್ಯೋತಿಯ ಕಾಣೋಣ।।
।।ಭಕ್ತರಾಗೋಣ।।

## ಆನಂದ ಆನಂದ

ಆನಂದ ಆನಂದ ಪರಮಾನಂದ।
ಓಂಕಾರದೊಳು ಬೆರೆಯೆ ಬ್ರಹ್ಮಾನಂದ ।।ಪ।।

ಓಂ ಶಕ್ತಿ ಶುಭನಾಮ ಅನುಗಾಲಜಪಿಸಿ
ಆನಂದ ಸುಧೆಯಿಂದ ಅಭಿಷೇಕ ಹರಿಸಿ
ಮನವೆಂಬೊ ಮಧುವನ್ನು ನೈವೇದ್ಯಕರಿಸಿ
ಚಿದ್ರೂಪಿ ಜಗನ್ಮಾತೆ ಚರಣವನು ಭಜಿಸಿ ।।ಆನ

ಮೈಯೆಲ್ಲ ಕಣ್ಣಾಗಿ ಅಂಗಾಂಗ ಕಿವಿಯಾಗಿ
ಆ ದಿವ್ಯ ನಾಮದಲಿ ಮನವನ್ನು ನಿಲಿಸಿ
ನನದೆಂಬೊ ಭ್ರಮೆ ಬಿಟ್ಟು ಬಾಳೆಲ್ಲ ಮುಡಿಪಿಟ್ಟು
ಓಂಕಾರ ರೂಪದೊಳು ಲಯವಾಗಿ ।।ಆನ

ಆನಂದ ಆನಂದ ಪರಮಾನಂದ
ಓಂ ಕಾರದೊಳು ಬೆರೆಯೆ ಬ್ರಹ್ಮಾನಂದ।

## ನಿನ್ನಿಂದಲೇ ಸ್ಥಾನ

ನಿನ್ನಿಂದಲೇ ಸ್ಥಾನ ನಿನ್ನಿಂದಲೇ ಮಾನ
ನಿನ್ನಿಂದಲೇ ಭೋಗ ವೈಭೋಗವೂ।
ನಿನ್ನಿಂದಲೇ ದೇಹ ನಿನ್ನಿಂದಲೇ ಮೋಹ।
ನೀನಾವರಿಸಿದೆ ಜಗವೆಲ್ಲವೂ।
।।ತಾಯೆ ನೀನಾವರಿಸಿದೆ ಜಗವೆಲ್ಲವೂ।।

ನಿನ್ನಿಂದಲೇ ಸೊಗವು ನಿನ್ನಿಂದಲೇ ಜಗವು|
ನಿನ್ನಿಂದಲೇ ಜ್ಞಾನ ಅಜ್ಞಾನವೂ|
ನಿನ್ನಿರುವೆ ಶಕ್ತಿ ನಿನ್ನೊಲವೇ ಭಕ್ತಿ|
ನಿನ್ನರಿತಾಮನ ಕೈಲಾಸವು|
||ತಾಯಿ ನೀನಾವರಿಸಿಹೆ ಜಗವೆಲ್ಲವೂ||

ನಿನ್ನಿಂದಲೇ ಜನನ ನಿನ್ನಿಂದಲೇ ಮರಣ|
ಸಕಲ ಚರಾಚರ ನೀನೆಲ್ಲವೂ|
ನಿನ್ನಿಂದಲೇ ಪ್ರಕೃತಿ ನಿನ್ನಿಂದಲೇ ಸುಕೃತಿ|
ನಿನ್ನಿಂದಲೇ ಸೃಷ್ಟಿ ಸ್ಥಿತಿಲಯವೂ||
||ತಾಯಿ ನೀನಾವರಿಸಿಹೆ ಜಗವೆಲ್ಲವೂ||

## ಜಗದಾದಿ ಶಕ್ತಿ

ಜಗದಾದಿ ಶಕ್ತಿ ಜಗಜ್ಜೀವ ಮುಕ್ತಿ
ಜಯ ಮಹಾಕಾಳಿ ಅಂಬಾ| ಜಯ ಜಯ ಸರ್ವಶಕ್ತಿ ಮೂಕಾಂಬಾ||

ಜಯಜಗದಂಬೆ ಜಯ ಮೂಕಾಂಬೆ ಪಾಲಿಸಮ್ಮಾ ಅನವರತ|
ಜಯ ಜಯ ಗೌರಿ ಜಯ ಶಾಕಾಂಬರಿ
ಜಯ ಮಾತಂಗಿ ಜಯ ಅಭಯಂಕರಿ||

ದಾನವಾಂತಕಳೆ ಕ್ಷಾಮನಾಶಕಳೆ ಆದಿಶಕ್ತಿ ಅಂಬಾ
ಜಯಜಯ ಸರ್ವಶಕ್ತಿ ಮೂಕಾಂಬಾ||

ಜಯ ಮಹಕಾಳಿ ಜಯ ಮಹಲಕ್ಷ್ಮಿ
ಜಯಜಯ ಶಾರದೆ ಶಾಂಭವಿಯೇ|
ಜಯ ಜಯ ದುರ್ಗೆ ಜಯ ಓಂಕಾರೇ
ಜಯ ಜಗನ್ಮಾತೇ ಭೈರವಿಯೇ||
ಸಕಲ ಚರಾಚರ ಚೇತನರೂಪಳೇ ಆದಿಶಕ್ತಿ ಅಂಬಾ
ಜಯ ಜಯ ಸರ್ವಶಕ್ತಿ ಮೂಕಾಂಬಾ ||

ಜಯ ಕಲ್ಯಾಣಿ ಜಯ ಶರ್ವಾಣಿ
ಜಯ ವಾಗೀಶ್ವರೀ ಜಯ ಗೌರೀ
ಜಯ ಕಾಮೇಶ್ವರೀ। ಜಯ ಮಾಹೇಶ್ವರೀ
ಜಯ ರಾಜೇಶ್ವರೀ। ಜ್ಞಾನಪ್ರಿಯೇ
ಪ್ರಕೃತಿ ಪುರುಷ ಚಿಚ್ಛಕ್ತಿ ಭೈರವಿಯೇ ಆದಿಶಕ್ತಿ ಅಂಬಾ
ಜಯ ಜಯ ಸರ್ವಶಕ್ತಿ ಮೂಕಾಂಬಾ॥

## ಹೇ ಪರಮೇಶ್ವರಿ

ಹೇ ಪರಮೇಶ್ವರಿ। ಜಯ ಜಗದೀಶ್ವರಿ
ಶಂಭೋಶಂಕರಿ ಮೂಕಾಂಬಾ ॥
ನಿನ್ನ ನಂಬೀ ಬಂದೆ ಎನ್ನ ಕೈಬಿಡದಿರು
ಘನ್ನ ಮಹಿಮಳೆ। ಮೂಕಾಂಬಾ ॥ಪ॥

ದೇವಿ ಮೂಕಾಂಬಾ। ನೀ ಕಾಯೇ ಜಗದಂಬಾ
ಅಂಬ ದೇವಿ ಮೂಕಾಂಬಾ। ನೀ ಕಾಯೇ ಜಗದಂಬಾ॥ಅ.ಪ॥

ಭಕ್ತಾಧೀನೇ ನಿತ್ಯ ಪರಾಯಣೆ
ಸತ್ಯದಿ ಸಲಹೌ ಜಗದಂಬಾ
ಅಂಬದೇವಿ ಮೂಕಾಂಬಾ। ನೀ ಕಾಯೇ ಜಗದಂಬಾ॥

ನಿತ್ಯ ನಿರಂಜನೆ ನಿಗಮಾತೀತೆ
ಸುಗುಣ ಸಂಪ್ರೀತೆ ಜಗದಂಬಾ
ಅಂಬದೇವಿ ಮೂಕಾಂಬಾ। ನೀ ಕಾಯೇ ಜಗದಂಬಾ॥

ಆದಿಯಲುದಿಸಿ ಅವತಾರಗೈದಿಹ
ಆದಿಶಕ್ತಿಯು ನೀನಮ್ಮ
ಅಂಬದೇವಿ ಮೂಕಾಂಬಾ। ನೀ ಕಾಯೇ ಜಗದಂಬಾ॥

ದುಷ್ಟರ ಶಿಕ್ಷಿಸಿ ಶಿಷ್ಟರ ಪೊರೆಯುವ
ಇಷ್ಟ ದಾಯಿನಿ ನೀನಮ್ಮ
ಅಂಬ ದೇವಿ ಮೂಕಾಂಬಾ। ನೀ ಕಾಯೇ ಜಗದಂಬಾ॥

## ಓಂ ಶಕ್ತಿ

ಓಂ ಶಕ್ತಿ| ಓಂ ಶಕ್ತಿ| ಓಂ ಶಕ್ತಿ ಓಂ|
ಓಂ ಶಕ್ತಿ| ಓಂ ಶಕ್ತಿ| ಓಂ ಶಕ್ತಿ ಓಂ||
ಜಯ ಮೂಕಾಂಬಿಕೆ ದೇವೀ||ಪ||

ಆದಿಶಕ್ತಿ ವಿಶ್ವಶಕ್ತಿ ಓಂ|
ಬ್ರಹ್ಮಶಕ್ತಿ| ವಿಷ್ಣುಶಕ್ತಿ| ಶಿವ ಶಕ್ತಿ ಓಂ|
ಓಂ ಶಕ್ತಿ| ಓಂ ಶಕ್ತಿ| ಓಂ ಶಕ್ತಿ ಓಂ||
ಜಯ ಮೂಕಾಂಬಿಕೆ ದೇವಿ ||

ಮಹಕಾಳಿ ಮಹಲಕ್ಷ್ಮಿ ಓಂ|
ಮಹಸರಸ್ವತಿ| ಶಾರದೆ ಶಾಂಭವಿ ಓಂ|
ಓಂ ಶಕ್ತಿ| ಓಂ ಶಕ್ತಿ| ಓಂ ಶಕ್ತಿ ಓಂ|
ಜಯ ಮೂಕಾಂಬಿಕೆ ದೇವಿ ||

ಕಾತ್ಯಾಯನಿ ನಾರಾಯಣಿ ಓಂ|
ಶಂಕರಿ ಶಾಂಭವಿ ಭೈರವಿ ಓಂ|
ಓಂ ಶಕ್ತಿ| ಓಂ ಶಕ್ತಿ| ಓಂ ಶಕ್ತಿ ಓಂ||
ಜಯ ಮೂಕಾಂಬಿಕೆ ದೇವೀ ....||

ಓಂ ಶಕ್ತಿ ಓಂ ಶಕ್ತಿ| ಓಂ ಶಕ್ತಿ ಓಂ.....||
ಓಂ ... ಓಂ ... ಓಂ...||
ಓಂ ಶಾಂತಿಃ ಶಾಂತಿಃ ಶಾಂತಿಃ||

## ಪಾಹಿ ನಮೋ ಪರಿಪಾಹಿ

ಪಾಹಿ ನಮೋ ಪರಿ ಪಾಹಿ ನಮೋ|
ಪಾಹಿ ಪರಮೆ ಶಿವ-ಶಕ್ತಿ ನಮೋ||
ದೇಹಿ ನಮೋ ವರ ದೇಹಿ ನಮೋ|
ಭವ ಮುಕ್ತ ಪೀಠಸ್ಥೆ ಮೂಕಾಂಬೆ ನಮೋ ||ಪಾ

ಶಕ್ತಿ ನಮೋ ಮಹಶಕ್ತಿ ನಮೋ
ಆದಿಶಕ್ತಿ ರುದ್ರಾಣಿ ನಮೋ||
ದುರ್ಗೆ ನಮೋ ನವದುರ್ಗೆ ನಮೋ
ವಿಶ್ವವಂದ್ಯೆ ಜಗನ್ಮಾತೆ ನಮೋ

ವಾಣಿ ನಮೋ ಗೀರ್ವಾಣಿ ನಮೋ
ವಾಗೀಶ್ವರಿ ಬ್ರಹ್ಮಾಣಿ ನಮೋ||
ಲಕ್ಷ್ಮಿ ನಮೋ ಅಷ್ಟಲಕ್ಷ್ಮಿ ನಮೋ
ನಾರಾಯಣಿ ಮಹಲಕ್ಷ್ಮಿ ನಮೋ

ರುದ್ರಾಣಿ ಬ್ರಹ್ಮಾಣಿ ನಾರಾಯಣೀ ...
ಓಂಶಕ್ತಿ ಜಗಜ್ಜನನಿ ಕಾತ್ಯಾಯನೀ...||

ಬ್ರಾಹ್ಮಿ ಮಾಹೇಶ್ವರೀ| ಕೌಮಾರಿ ವೈಷ್ಣವೀ
ವಾರಾಹಿ ಇಂದ್ರಾಣಿ ನಾರಸಿಂಹೀ||
ದುರ್ಗಾದ್ಯಾ ಭಗವತೀ ಸರಸ್ವತೀ ಅಂಬಿಕಾ
ಮಹಿಷ ಮರ್ದಿನಿ ಚಂಡಿ ವಾಗೀಶ್ವರೀ||

ಸಪ್ತ ಮಹ ಮಾತೃಕಾ| ನವದುರ್ಗ ಕಾಳಿಕಾ
ಓಂ ಶಕ್ತಿ ಓಂ ಶಕ್ತಿ ಹೃದಯಸ್ಥಿತೆ
ಓಂಕಾರಿ ಝೇಂಕಾರಿ| ಮಧು ಕೈಟಕಂಹಾರಿ
ಮೂಕಾಂಬೆ ಭವಮುಕ್ತ ಪೀಠಸ್ಥಿತೆ

ಓಂ.... ಶಕ್ತಿ ... ಓಂ ......ಶಕ್ತಿ
ಓಂ... ಶಕ್ತಿ ಓಂ ... ಓಂ,....

||ಪಾಹಿ ನಮೋ ಪರಿ ಪಾಹಿ ನಮೋ||

# ಜಯಮಂಗಳಂ

ಜಯ ಮಂಗಳಂ ನಿತ್ಯ ಶುಭಮಂಗಳಂ||

ವಂದಿಪೆನು ಗಣಪನಿಗೆ| ವಂದಿಪೆನು ಷಣ್ಮುಖಿಗೆ
ವಂದಿಪೆನು ಗುರು| ಸ್ವಾಮಿ ಅಯ್ಯಪ್ಪಗೆ
ವಂದಿಪೆನು ಅಷ್ಟ ದಿಕ್ಪಾಲ| ನವಗ್ರಹಗಳಿಗೆ
ವಂದಿಪೆನು ಪಂಚ| ಭೂತಾತ್ಮಗಳಿಗೆ ||ಜಯ||

ವಂದಿಪೆನು ಸೃಷ್ಟಿ ಸ್ಥಿತಿ| ಲಯಕರ್ತೆ ಅಂಬಿಕೆಗೆ
ವಂದಿಪೆನು ಮುಕ್ಕೋಟಿ ದೇವಗಣಕೆ
ವಂದಿಪೆನು ಅಜಹರಿ ಹರರಾಮ ಮಾರುತಿಗೆ
ವಂದಿಪೆನು ಕರಮುಗಿದು ಭಕ್ತಜನಕೆ ||ಜಯ||

ವಂದಿಪೆನು ಪದ್ಮಾವತೀ ಲಕ್ಷ್ಮಿಯರಸಗೆ|
ವಂದಿಪೆನು ಸಪ್ತಗಿರಿವಾಸ ಹರಿಗೆ
ವಂದಿಪೆನು ತಿರುಮಲ ತಿರುವೆಂಕಟೇಶಗೆ
ವಂದಿಪೆನು ಜಗದೊಡೆಯ ಶ್ರೀಚರಣಕೇ||

||ಜಯ ಮಂಗಳಂ ನಿತ್ಯ ಶುಭಮಂಗಳಂ||

# ಜಯತು ಜಯತು

ಜಯತು ಜಯತು ಕಲ್ಯಾಣೀ
ಶುಭ ವಾಣೀ ... ಗೀರ್ವಾಣೀ ...
ಆರತಿ ಬೆಳಗಿರೆ ಚೆಂದದಾ| ಮುತ್ತಿನಾರತಿ ಬೆಳಗಿರೆ ರನ್ನದಾ|| ||ಪ||

ಶ್ರೀ ಹರಿ ಪ್ರಿಯೆ ಶ್ರೀ ಭಾಮ ದೇವಿಗೆ|
ಕ್ಷೀರ ಸಾಗರ ನಿವಾಸಿತೆ ಲಕ್ಷ್ಮಿಗೆ|
ಆರತಿ ಬೆಳಗಿರೆ ಚೆಂದದಾ.... ||

ಶಿವಸತಿ ಪಾರ್ವತಿ ಸರ್ವಮಂಗಳೆಗೆ।
ಕಾಮಿತ ಫಲದೇ ಕಾತ್ಯಾಯನಿಗೇ ।
ಆರತಿ ಬೆಳಗಿರೆ ಚೆಂದದಾ ..... ॥

ಬ್ರಹ್ಮನ ರಾಣಿ ಹಂಸವಾಹಿನಿ।
ವಿದ್ಯಾಧರೆ ಜಯ ಶಾರದೆಗೇ।
ಆರತಿ ಬೆಳಗಿರೆ ಚೆಂದದಾ....॥

ಶ್ರೀ ಚಕ್ರದೊಳು ನೆಲಸಿಹ ಅಂಬೆಗೆ।
ಜ್ಯೋತಿರ್ಲಿಂಗ ಸ್ವರೂಪಿಣಿಗೆ
ಆರತಿ ಬೆಳಗಿರೆ ಚೆಂದದಾ ...
ಮುತ್ತಿನಾರತಿ ಬೆಳಗಿರೇ ರನ್ನದಾ ...॥

॥ಜಯತು ಜಯತು ಕಲ್ಯಾಣಿ॥

